# ಹೆಜ್ಜೆಗಳು

(ಕಾದಂಬರಿ)

ಪದ್ಮಾ ಶ್ರೀಧರ್

ಸೌಮ್ಯ ಎಂ.
ಪ್ರಕಾಶಕರು ಮತ್ತು ಪುಸ್ತಕ ವಿತರಕರು
ನಂ. 7/1, ಕೃಷ್ಣರಾವ್ ಪಾರ್ಕ್ ಎದುರು,
ಬಸವನಗುಡಿ, ಬೆಂಗಳೂರು-560 004.

**HEJJEGALU**-A Novel by **Padma Shreedhar**
Published By **Swamya** No. 7/1, Opp. Krishna Rao Park, Basavanagudi, Bangalore-560 004.

| | | |
|---|---|---|
| ಪ್ರಥಮ ಮುದ್ರಣ | : | 2009 |
| ಪುಟಗಳು | : | 110 |
| ಬೆಲೆ | : | ರೂ. 60/- |
| ಉಪಯೋಗಿಸಿದ ಕಾಗದ | : | 70gsm ಮ್ಯಾಪ್ಲಿಥೊ |
| ಮುಖಪುಟ | : | ಆರ್ಟ್ ಫೋಕಸ್ |
| ಹಕ್ಕುಗಳು | : | ಲೇಖಕರದು |

ಸೌಮ್ಯ ಎಂ.
ಪ್ರಕಾಶಕರು ಮತ್ತು ಪುಸ್ತಕ ವಿತರಕರು
ನಂ. 7/1, ಕೃಷ್ಣರಾವ್ ಪಾರ್ಕ್ ಎದುರು,
ಬಸವನಗುಡಿ, ಬೆಂಗಳೂರು-560 004.

ಅಕ್ಷರ ಜೋಡಣೆ :
ಪ್ರಶಾಂತ್ ಎಂಟರ್‌ಪ್ರೈಸಸ್
ತ್ಯಾಗರಾಜನಗರ, ಬೆಂಗಳೂರು-28
ದೂರವಾಣಿ : 26761529

ಮುದ್ರಣ : ಅಶ್ವಿನಿ ಪ್ರಿಂಟರ್ಸ್, ಬೆಂಗಳೂರು

# ಮುನ್ನುಡಿ

''ಹೆಜ್ಜೆಗಳು' ಒಂದು ಲಘುಕಾದಂಬರಿ. ಕೌಟುಂಬಿಕ ಪಾತ್ರಗಳನ್ನೊಳಗೊಂಡ ಒಂದು ಸಾಮಾಜಿಕ ಕಾದಂಬರಿ. ಸಾಂಸಾರಿಕ ಜೀವನದಲ್ಲಿ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಸಮಸ್ಯೆಗಳು ಗಂಭೀರ ಸ್ಥಿತಿಯನ್ನು ತಲುಪಿದಾಗ ದಿಕ್ಕು ತೋಚದಂತಾಗುತ್ತದೆ. ಹೆಜ್ಜೆಗಳು ತಪ್ಪು ದಾರಿಯನ್ನು ಹಿಡಿಯುತ್ತವೆ. ಮತ್ತೆ ಹಿಂದಕ್ಕೆ ಬರಲಾಗದಂತಾದಾಗ, ಹೆಜ್ಜೆಗಳ ಮಾರ್ಗವೇ ಬದಲಾಗುತ್ತದೆ. ಒಂದೆಡೆ ಹೋಗಿ ನಿಲ್ಲಬೇಕಾದ ಸ್ಥಿತಿ ಕಂಡು ಬರುತ್ತದೆ. ಅವಕಾಶವೂ ಒದಗುತ್ತದೆ. ಈ ಅಂಶವನ್ನು ಮುಖ್ಯವನ್ನಾಗಿಟ್ಟುಕೊಂಡು ಬರೆದಿರುವ ಕಾದಂಬರಿ ಇದು.

ಪಾತ್ರಗಳು, ಸನ್ನಿವೇಶಗಳು, ಎಲ್ಲವೂ ಕಾಲ್ಪನಿಕ. ಕತೆಯ ರಚನೆಗಾಗಿ ಸೃಷ್ಟಿಗೊಂಡಿರುವವು. ಓದುಗರ ಮುಂದೆ ಬರುತ್ತಿರುವ ಈ ಕಾದಂಬರಿ, ಎಲ್ಲರಿಗೂ ಇಷ್ಟವಾಗುತ್ತದೆಂದು ನನ್ನ ಅಭಿಲಾಷೆ. ಓದುಗರ ಮೆಚ್ಚಿಗೆಯೇ, ನನ್ನ ಬರಹಕ್ಕೆ ಪ್ರೋತ್ಸಾಹ.

ಈ ಕಾದಂಬರಿಯನ್ನು ಹೊರತರುತ್ತಿರುವ ಪ್ರಕಾಶಕ ವರ್ಗದವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ವಂದನೆಗಳೊಂದಿಗೆ,

ಇತಿ ತಮ್ಮ ವಿಶ್ವಾಸಿ

ಪದ್ಮಾಶ್ರೀಧರ್

ಬೆಂಕಿ' ಬೆಂಕಿ ಎಂದು ಯಾರೋ ಹಿಂದೆ ಕೂತಿದ್ದವರು ಕಿರುಚಿದೊಡನೆ, ಬಸ್ಸಿನಲ್ಲಿ ಕೋಲಾಹಲವುಂಟಾಯಿತು. 'ಗಾಡಿ ನಿಲ್ಲಿಸ್ರೀ' ಎಂದು ಯಾರೋ ಕೂಗಿದಾಗ, ಡ್ರೈವರ್ ತಟ್ಟನೇ ಬ್ರೇಕ್ ಹಾಕಿದ. ಬಸ್ಸಿನಲ್ಲಿ ಕೂತಿದ್ದವರು ನಿಂತಿದ್ದವರು, ಒಬ್ಬರ ಮೇಲೊಬ್ಬರು ಬಿದ್ದರು. ಕೂಗಾಟ, ಚೀರಾಟ ಪ್ರಾರಂಭವಾಯಿತು.

ನಿಂತಿದ್ದ ಸಂಧ್ಯಾ ಮುಗ್ಗರಿಸಿದಳು. ತತ್ತರಿಸುತ್ತಾ ಸರಿಯಾಗಿ ನಿಲ್ಲುವ ಮುಂಚೆಯೇ ಹಿಂದಿದ್ದವರು ಅವಳನ್ನು ತಳ್ಳತೊಡಗಿದಾಗ, ಮುಂದೆ ಮುಂದೆ ಬಂದು ಬಾಗಿಲಿನ ಬಳಿ ಬಂದು, ಇಳಿಯುವ ಮುಂಚೆಯೇ ಕೆಳಗೆ ಉರುಳಿದ್ದಳು. ಸಣ್ಣಗೆ ಚೀರಿ ಎದ್ದು ನಿಲ್ಲುವಷ್ಟರಲ್ಲಿ ಮತ್ತೊಮ್ಮೆ ಯಾರೋ ತಳ್ಳಿದಂತಾದಾಗ ಉರುಳುತ್ತಾ ರಸ್ತೆಯ ಬದಿಯಲ್ಲಿದ್ದ ಒಂದು ಮರದ ಬುಡದ ಬಳಿ ಬಂದು ಬಿದ್ದಳು.

ನಡೆದ ಆಘಾತದಿಂದ ಅಳುಬಂದಂತಾದಾಗ, ಮೈಕೈ ಕೊಡವಿಕೊಳ್ಳುತ್ತಾ ಎದ್ದು ನಿಲ್ಲಲು ಪ್ರಯತ್ನಿಸಿದಳು. ಅರೇ ! ಮೈಮೇಲಿನ ಸೀರೆಯೇ ಇಲ್ಲ ಎಂದು ಅರಿವಾದಾಗ ನಾಚಿಕೆಯಿಂದ ಮುದುರಿ, ಮರದ ಹಿಂದೆ ಸರಿದು ನಿಂತಳು. ಆ ತಳ್ಳುವಿಕೆಯ ಭರದಲ್ಲಿ ಅವಳು ಉಟ್ಟಿದ್ದ ನೈಲೆಕ್ಸ್ ಸೀರೆ ಹೇಗೆ ಬಿಚ್ಚಿಹೋಯಿತೋ, ಈಗಂತೂ ಅವಳು ಬರೀ ಪೆಟ್ಟಿಕೋಟ್, ರವಿಕೆ ಧರಿಸಿ ನಿಂತಿದ್ದಳು. ಕೈಯಲ್ಲಿದ್ದ ಪರ್ಸು ಎಲ್ಲಿ ಬಿದ್ದು ಹೋಯಿತೋ, ಹುಡುಕುವುದೂ ಸಾಧ್ಯವಿರಲಿಲ್ಲ. ಏನು ಮಾಡಬೇಕೆಂದು ತೋಚದೇ ನಿಂತಿದ್ದಳು. ಜನರ ಕೂಗಾಟ ಕಿರುಚಾಟ ಕಮ್ಮಿಯಾಯಿತೆನಿಸಿದಾಗ ಹಿಂತಿರುಗಿ ನೋಡಿದಳು. ಬಸ್ಸು ಹೊರಟು ಹೋಗಿತ್ತು. ತನಗೆ ಒದಗಿದ ದುರವಸ್ಥೆಗೆ ಮರುಗುತ್ತಾ, ಅಸಹಾಯಕಳಾಗಿ ಅಳುತ್ತಾ ಮರದ ಬುಡಕ್ಕೆ ಒರಗಿ ಕುಸಿದು ಕುಳಿತಳು.

ಎಷ್ಟು ಹೊತ್ತು ಹಾಗೇ ಕುಳಿತಿದ್ದಳೋ, ಮೈ ಮೇಲೆ ಏನೋ ಬಿದ್ದಂತಾಗಲು, ಬೆಚ್ಚಿ ಸಣ್ಣಗೆ ಚೀರಿದಳು. ಮೈಮೇಲೆ ಬಿದ್ದಿದ್ದ ಶಾಲನ್ನು ಕೈಗೆತ್ತಿಕೊಂಡು ಅತ್ತಿತ್ತ ನೋಡಿದಳು. ಅನತಿ ದೂರದಲ್ಲಿ ಒಬ್ಬ ಗಂಡಸು, ಕಾರಿಗೆ ಒರಗಿ ನಿಂತು, ಅವಳ ಕಡೆಗೇ ನೋಡುತ್ತಿದ್ದುದನ್ನು ಗಮನಿಸಿ, ಸರ್ರನೇ ಶಾಲನ್ನು ಹೊದ್ದು ತನ್ನ ಮೈ ಮುಚ್ಚಿಕೊಂಡಳು.

ಆ ಗಂಡಸು ಅವಳನ್ನು ಸಮೀಪಿಸುತ್ತಿರುವುದನ್ನು ಗಮನಿಸಿ, ಎರಡು ಹೆಜ್ಜೆ ಹಿಂದೆ

ಸರಿದು, ಮರದ ಮರೆಯಲ್ಲಿ ನಿಂತಳು.

"ಹೆದರಬೇಡಿ. ಏನೋ ತೊಂದರೆಯಲ್ಲಿದ್ದೀರಿ ಅಂತ ಅನ್ನಿಸ್ತು. ನಾನೇ ಆ ಶಾಲನ್ನು ನಿಮ್ಮ ಬಳಿಗೆ ಎಸೆದದ್ದು.... ಏನಾಯ್ತು ಅಂತ ಹೇಳಿ. ನಾನು ನಿಮಗೆ ಸಹಾಯ ಮಾಡ್ತೀನಿ"

ಅವನ ಸೌಜನ್ಯದ ಮಾತುಗಳು ಅವಳಿಗೆ ಧೈರ್ಯ ತಂದಿತಾದರೂ, ಅನುಮಾನದಿಂದ ಹಾಗೇ ನಿಂತಿಳು.

"ನೋಡಿ, ಈ ಹೆದ್ದಾರಿಯಲ್ಲಿ ಹೀಗೆ ಒಂಟಿಯಾಗಿ ನಿಂತಿರುವುದು ಸರಿಯಲ್ಲ. ನನ್ನ ಮೇಲೆ ನಂಬಿಕೆ ಇದ್ದರೆ ನನ್ನ ಜತೆ ಬನ್ನಿ. ಇಲ್ಲೇ ನಮ್ಮ ಮನೆ.... ನಿಮಗೇನು ಸಹಾಯಬೇಕೋ ನಾನು ಮಾಡ್ತೀನಿ"

ಮತ್ತೊಮ್ಮೆ ಅವನು ನುಡಿದಾಗ ಅವಳು ಮರೆಯಿಂದ ಇಣುಕಿ ಅವನ ಕಡೆಗೆ ನೋಡಿದಳು. ನೋಡಿದರೆ ಒಳ್ಳೆಯ ಮನುಷ್ಯನಂತೆ ಕಾಣುತ್ತಾನೆ.....ಅಲ್ಲದೇ ತಾನು ಈಗ ಇರುವ ಪರಿಸ್ಥಿತಿಯಲ್ಲಿ ಯಾರ ಸಹಾಯವೂ ಇಲ್ಲದೆ ಮನೆಗೆ ವಾಪಸ್ಸು ಹೋಗುವಂತೆಯೇ ಇಲ್ಲ ಅಂತ ಅನಿಸಿದಾಗ, ಮರದ ಮರೆಯಿಂದ ಈಚೆಗೆ ಬಂದಳು.

ಕಾರಿನ ಬಳಿ ನಿಂತಿದ್ದವನು, ಅವಳ ಕಡೆಗೆ ಒಮ್ಮೆ ನೋಡಿ, ಕಾರಿನ ಹಿಂದಿನ ಬಾಗಿಲನ್ನು ತೆಗೆದ. ಅನುಮಾನಿಸುತ್ತಾ, ಕಾರನ್ನು ಹತ್ತಿ ಕುಳಿತಳು. ಕಾರನ್ನು ಸ್ಟಾರ್ಟ್ ಮಾಡುವ ಮೊದಲು ಕೇಳಿದ.

"ನಿಮ್ಮ ಮನೆ ಎಲ್ಲಿ ಅಂತ ಹೇಳಿದ್ರೆ, ನಾನು, ಕರೆದುಕೊಂಡೂ ಹೋಗಿ ಬಿಟ್ಟು ಬರ್ತೀನಿ."

"ನಾನು.....ನಾನು ಹೀಗೆ.... ಈ ವೇಷದಲ್ಲಿ ಹೇಗೆ ಹೋಗಲಿ ?" ಹೆದರಿದ್ದರೂ ಅವನನ್ನೇ ಪ್ರಶ್ನಿಸಿದಳು.

"ಓ.... ಹಾಗಾದರೆ ಏನು ಮಾಡ್ತೀರಿ ! ತಿರುಗಿ ನೋಡದೇ ಪ್ರಶ್ನಿಸಿದ.

"ನನ್ನ ಪರ್ಸು ಸಹ ಇಲ್ಲ, ನನಗೇನು ಮಾಡಬೇಕು ಅಂತ ತೋಚ್ತಾನೇ ಇಲ್ಲ.... ನನ್ನ ಹತ್ತಿರ ಹಣ ಇಲ್ಲ."

"ಸರಿ ಹಾಗಾದ್ರೆ.... ಇಲ್ಲೇ ಹತ್ತಿರದಲ್ಲೇ ನಮ್ಮ ಮನೆ ಇದೆ. ಮೊದಲು ಅಲ್ಲಿಗೆ ಹೋಗೋಣ...." ಕಾರನ್ನು ಅವನು ಓಡಿಸಿದಾಗ, ಅವಳು ನಿಟ್ಟುಸಿರು ಬಿಟ್ಟಳು.

ಪಕ್ಕದ ತಿರುವಿನಲ್ಲಿ, ಒಂದು ದೊಡ್ಡ ಗೇಟನ್ನು ದಾಟಿ, ಕಾರು ಒಂದು ಮನೆಯ ಮುಂದೆ ನಿಂತಿತು. ಕಾರಿನಿಂದ ಇಳಿದು ಬಂದು ಅವನು, ಮನೆಯ ಮೆಟ್ಟಿಲನ್ನು ಹತ್ತಿ, ಮನೆಗೆ ಹಾಕಿದ್ದ ಬೀಗವನ್ನು ತೆಗೆದ.

"ಅಂದರೆ.... ಈ ಮನೆಯಲ್ಲಿ ಇವನೊಬ್ಬನೇ ಇದಾನೇನೋ.... ಹೇಗೆ ಒಳಗೆ ಹೋಗಲಿ !" ಎಂದು ಅನುಮಾನಿಸುತ್ತಾ ನಿಂತವಳನ್ನೇ ಹಿಂತಿರುಗಿ ನೋಡಿದ.

"ಓ...ನಿಮಗೆ ನನ್ನ ಮೇಲೆ ಅನುಮಾನ" ಎಂದು ನಕ್ಕು.... " ಈ ಮನೇಲಿ ನಾನೊಬ್ಬನೇ ಇರುವುದು. ನೀವು ಒಳಗೆ ಹೋಗಿ ಕೂತ್ಕೊಳ್ಳಿ.... ನಾನು ಈಗಲೇ ಬಂದೆ" ಎಂದು ಹೇಳುತ್ತಾ ಮತ್ತೆ ಕಾರನ್ನು ಹತ್ತಿ ಕುಳಿತ.

ಕಾರು ಹಿಂದಕ್ಕೆ ಓಡುತ್ತಾ ಗೇಟನ್ನು ದಾಟಿ ಮರೆಯಾದ ಮೇಲೆ, ಅತ್ತಿತ್ತ ನೋಡಿದ ಸಂಧ್ಯಾ ಮನೆಯ ಬಾಗಿಲ ಬಳಿ ಬಂದು ಒಳಕ್ಕೆ ಇಣುಕಿದಳು. ಅಚ್ಚುಕಟ್ಟಾಗಿ, ಅಂದವಾಗಿದ್ದ ಮನೆಯ, ಒಳ ಆವರಣ ಅವಳನ್ನು ಆಕರ್ಷಿಸಿತು. ಮೆಲ್ಲಗೆ ಒಳಗೆ ಅಡಿ ಇಟ್ಟಳು.

ಓರಣವಾಗಿದ್ದ ಮನೆಯ ಅಂದ ಚೆಂದಗಳನ್ನು ನಿಂತಲ್ಲಿಂದಲೇ ವೀಕ್ಷಿಸಿದಳು. ನಡು ಮನೆಯಲ್ಲಿದ್ದ ಕಪಾಟಿನಲ್ಲಿ ಜೋಡಿಸಿಟ್ಟಿದ್ದ ಪುಸ್ತಕಗಳು ಅವಳನ್ನು ಕರೆದವು. ಹತ್ತಿರದಿಂದ ನೋಡುವ ಮನಸ್ಸಾಯಿತು. ಕಪಾಟಿನ ಬಳಿ ನಿಂತು, ಒಂದೊಂದೇ ಪುಸ್ತಕಗಳ ಹೆಸರನ್ನು ಓದಲಾರಂಭಿಸಿದಳು.

ಕಾರಿನ ಬಾಗಿಲನ್ನು ಜೋರಾಗಿ ಹಾಕಿದ ಸದ್ದು ಕೇಳಿದ ಕೂಡಲೇ ಬೆಚ್ಚಿ ಗಡಿಬಿಡಿಯಿಂದ ಅಲ್ಲಿದ್ದ ಸೋಫಾದ ಮೇಲೆ ಕುಳಿತು, ಅವನು ಒಳಗೆ ಬರುವುದನ್ನೇ ನಿರೀಕ್ಷಿಸಿದಳು.

ಮುಂದಿದ್ದ ಟೀಪಾಯ್ ಮೇಲೆ ಒಂದು ಪ್ಲಾಸ್ಟಿಕ್ ಕೈಚೀಲವನ್ನು ಇಟ್ಟು ನುಡಿದ.

"ಇದರಲ್ಲಿ ಸೀರೆ ಇದೆ. ಮೊದಲು ಉಟ್ಟು ಬನ್ನಿ ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಕ್ಕೆ ಹೋದವನನ್ನೇ ಕೃತಜ್ಞತೆಯಿಂದ ನೋಡಿ, ಚೀಲವನ್ನು ಕೈಗೆತ್ತಿಕೊಂಡಳು.

ಎದುರಿಗಿದ್ದ ರೂಮಿನೊಳಗೆ ಬಂದು, ಬಾಗಿಲನ್ನು ಹಾಕಿಕೊಂಡು ಒಮ್ಮೆ ಸುತ್ತಲೂ ನೋಡಿದಳು. ಮಂಚ, ಕುರ್ಚಿ, ಪುಸ್ತಕಗಳನ್ನು ನೋಡಿ, ಇದು ಅವನು ಮಲಗುವ ಕೋಣೆ ಇರಬೇಕು ಎಂದುಕೊಂಡು, ಸರಸರನೆ, ಕವರನ್ನು ಹರಿದು ಸೀರೆಯನ್ನು ಆಚೆಗೆ ತೆಗೆದಳು.

ಎರಡು ಸಾಧಾರಣವಾದ ಸೀರೆಗಳು. ಇದರಲ್ಲಿ ಯಾವುದು ತನಗೊ ? ಯಾವುದನ್ನು ಉಡಲಿ ? ಎಂದು ಒಂದು ಗಳಿಗೆ ಚಿಂತಿಸಿ, ಯಾವುದೋ ಒಂದು ಎಂದುಕೊಂಡು, ಒಂದನ್ನು ಬಿಚ್ಚಿ ಉಟ್ಟು ಇನ್ನೊಂದನ್ನು ಹಾಗೇ ತುರುಕಿಟ್ಟಳು.

ಸರಸರನೆ ಸೀರೆ ಉಟ್ಟು ಹೊರಗೆ ಬರುವಷ್ಟರಲ್ಲಿ ಅವನು ಅಡಿಗೆ ಮನೆಯಿಂದ ಎರಡು ಕಪ್‌ಗಳಲ್ಲಿ ಬಿಸಿಬಿಸಿ ಕಾಫಿಯನ್ನು ತಂದಿತ್ತ.

"ಕೂತ್ಕೊಳ್ಳಿ. ಮೊದಲು ಕಾಫಿ ಕುಡೀರಿ" ಎಂದ ಮುಗುಳ್ನಗುತ್ತಾ.

ಅವಳು ಸಕ್ಕಂತೆ ಮಾಡಿ, ಕುಳಿತಳು. ಕಾಫಿಯ ಕಪ್‌ನ್ನು ಅವಳ ಮುಂದೆ ಹಿಡಿದಾಗ ಬೇಡವೆನ್ನದೆ ತೆಗೆದುಕೊಂಡರೂ ಅನುಮಾನಿಸುತ್ತಾ ಕುಡಿಯದೇ ಹಾಗೇ ಕೂತವಳನ್ನು ಗಮನಿಸಿ ನಕ್ಕ.

"ನಿಮಗೇನಾದರೂ ಅನುಮಾನವಿದ್ದರೆ ಕುಡೀಬೇಡಿ" ಎಂದ.

"ಹಾಗೇನಿಲ್ಲ..." ಎಂದು ಸಂಕೋಚದಿಂದ ನುಡಿದು, ಕುಡಿಯಲು ಪ್ರಾರಂಭಿಸಿದಳು.

ಕುಡಿಯುವುದನ್ನು ಮುಗಿಸಿ, ಕಪ್‌ನ್ನು ಕೆಳಗೆ ಇಟ್ಟು ನಂತರ ನುಡಿದ.

''ಬನ್ನಿ, ನಿಮ್ಮನ್ನ ನಿಮ್ಮ ಮನೆಗೆ ಡ್ರಾಪ್ ಮಾಡಿ ಬರ್ತೀನಿ.''

''ನಿಮಗೆ ತೊಂದರೆ.... ಪರವಾಗಿಲ್ಲ. ಒಂದೈದು ರೂಪಾಯಿ ಕೊಟ್ರೆ, ಬಸ್ಸಿನಲ್ಲಿ ಹೋಗ್ತೀನಿ....''

''ಇಲ್ಲಿಂದ ಅಷ್ಟು ಸುಲಭವಾಗಿ ಬಸ್ಸು ಸಿಗುತ್ತೆಅಂತ ಅಂದ್ಕೊಂಡ್ರಾ.... ಇರಲಿ, ಪರವಾಗಿಲ್ಲ, ನೀವು ಈ ದಿನ ನನ್ನ ಗೆಸ್ಟ್.... ನಾನು ಬರ್ತಿನಿ. ತೊಂದರೆ ಏನಿಲ್ಲ''

''ನಾನು ನಿಮ್ಮ ಗೆಸ್ಟಾ! ಯಾರೋ ಅಪರಿಚಿತಳು. ನಾನು''

''ಅದಕ್ಕೇನಂತೆ ಪರಿಚಯ ಮಾಡಿಕೊಂಡರಾಯ್ತು... ನನ್ನ ಹೆಸರು ದಿನೇಶ ಅಂತ. ನಾನೊಬ್ಬ ರಿಟೈರ್ಡ್ ಮಿಲಿಟರಿ ಆಫೀಸರ್. ಇದು ನನ್ನ ಎಸ್ಟೇಟ್ ಇಲ್ಲಿ, ಈ ಮನೆಯಲ್ಲಿ ನಾನು ಒಬ್ಬನೇ ಇದೀನಿ. ಸ್ವಲ್ಪ ದೂರದಲ್ಲಿ ಒಂದು ಚಿಕ್ಕ ಮನೆ ಇದೆ. ಅಲ್ಲಿ ನನ್ನ ಸರ್ವೆಂಟ್ ಇದಾನೆ ಅಷ್ಟೇ...'' ನಸುನಕ್ಕ.

ಅವಳು ತನ್ನ ಪರಿಚಯ ಹೇಳಲು ಅನುಮಾನಿಸುತ್ತಿರುವುದನ್ನು ಗಮನಿಸಿದ. ''ನಿಮಗೆ ಇಷ್ಟವಿಲ್ಲದಿದ್ದರೆ ನಿಮ್ಮ ಪರಿಚಯ ಬೇಡ ಬಿಡಿ. ಹೊರಡೋಣ್ವಾ ?'' ಎದ್ದು ನಿಂತ.

ಅವಳಿಗೆ ಸಂಕೋಚವೆನಿಸಿತು.

''ನನ್ನ ಹೆಸರು ಸಂಧ್ಯಾ ಅಂತ. ನಾನು ಇರುವುದು ಜೆ.ಪಿ. ನಗರದಲ್ಲಿ, ಇಲ್ಲಿಂದ ತುಂಬಾ ದೂರ....ಸುಮ್ಮನೆ ತೊಂದರೆ ನಿಮಗೆ. ನಾನು ಹೋಗ್ತೀನಿ.''

''ಪರವಾಗಿಲ್ಲ.... ನನಗೇನೂ ತೊಂದರೆ ಇಲ್ಲ, ನಾನು ಮನೇಲಿರುವುದೇ ಕಡಿಮೆ. ಹೊರಗೆ ಸುತ್ತಾಡ್ತಿರ್ತೀನಿ. ''ಅವನು, ಅವಳು ಹೊರಗೆ ಬರುವುದನ್ನು ಕಾದಿದ್ದು, ಮನೆಗೆ ಬೀಗ ಹಾಕಿ ಕಾರನ್ನುಏರಿ, ಹಿಂದಿನ ಬಾಗಿಲನ್ನು ತೆಗೆದ. ಅವಳು ಕುಳಿತನಂತರ, ತಾನೇ ಬಾಗಿಲನ್ನು ಎಳೆದು ಹಾಕಿ, ಕಾರನ್ನು ಓಡಿಸಿದ.

ದಾರಿಯಲ್ಲಿ ಯಾರೂ ಮಾತನಾಡಲಿಲ್ಲ. ಎಚ್ಚರಿಕೆಯಿಂದ ಅತ್ತಿತ್ತ ನೋಡುತ್ತಿದ್ದ ಅವಳು, ತನ್ನ ಮನೆಯ ಸಮೀಪದ ರಸ್ತೆಯ ತ್ತಿರುವು ಬಂದೊಡನೆ ಹೇಳಿದಳು. ''ಇಲ್ಲೇ ನಿಲ್ಲಿಸಿ. ನಾನು ಇಲ್ಲಿಂದ ಮುಂದೆ ಹೋಗ್ತೀನಿ.''

'ಯಾಕೆ ?' ಎಂದು ಅವನು ಕೇಳಲಿಲ್ಲ. ಆದರೆ ಅವನಿಗೆ ತಿಳಿಯಿತು. ಮನೆಯ ಬಳಿ ಯಾರೋ ಪರಿಚಯವಿಲ್ಲದವನ ಕಾರಿನಿಂದ ಇಳಿಯುವುದು ಸರಿಯಲ್ಲ, ಅದಕ್ಕೆ ಹಾಗೆ ಹೇಳಿದಾಳೆ ಎಂದುಕೊಂಡು ಕಾರನ್ನು ನಿಲ್ಲಿಸಿದ.

ಇಳಿದು ನಿಂತು, ಸಂಕೋಚದಿಂದ ಅವನ ಕಡೆ ನೋಡಿ, ನುಡಿದಳು.

''ನಿಮಗೆ ಎಷ್ಟು ಥ್ಯಾಂಕ್ಸ್ ಹೇಳಿದರೂ ಸಾಲದು. ಸದ್ಯದಲ್ಲೇ ಈ ಸೀರೇನ ವಾಪಸ್ಸು ಮಾಡ್ತೀನಿ.''

"ಛೆ, ಛೆ.... ನನಗ್ಯಾಕೆ ಸೀರೆ! ನೀವೇ ಇಟ್ಕೊಳ್ಳಿ" ತಟ್ಟನೆ ನುಡಿದ.

"ಹುಂ, ಹುಂ. ಸಾಧ್ಯವಿಲ್ಲ, ಯಾರು ಕೊಡಿಸಿದ್ದು ಅಂತ ಮನೇಲಿ ಕೇಳಿದ್ರೆ ಏನು ಹೇಳಲಿ! ಈ ಸೀರೇನ ನಾನು ಇಟ್ಕೊಳ್ಳೋದು ಸರಿಯಲ್ಲ."

"ನಿಜಾನೇ ಹೇಳಿದ್ರಾಯ್ತು..."ಎಂದು ಹೇಳ ಹೊರಟವನು, ಅವಳ ಮುಖ ನೋಡಿ ಅಷ್ಟಕ್ಕೇ ನಿಲ್ಲಿಸಿದ. ಮದುವೆಯಾದ ಒಬ್ಬ ಹೆಂಗಸು, ಒಬ್ಬ ಅಪರಿಚಿತ ಕೊಟ್ಟ ಸೀರೆಯನ್ನು ಉಟ್ಟು ಗಂಡನೊಡನೆ ಆ ವಿಷಯವನ್ನು ಕುರಿತು ನಿಜವನ್ನು ಹೇಳಿದರೆ, ಗಂಡ ಅದನ್ನ ನಂಬುತ್ತಾನೆಯೇ ಅಂತ ಎನಿಸಿದಾಗ, ಸುಮ್ಮನಾದ.

'ನಿಮ್ಮಿಷ್ಟ' ಎಂದ. ಅವಳು ಮತ್ತೊಮ್ಮೆ ಥ್ಯಾಂಕ್ಸ್ ಹೇಳಿ ಮುಂದೆ ನಡೆದಳು. ಅವನು ಕಾರನ್ನು ಹಿಂದಕ್ಕೆ ಓಡಿಸಿದ.

ದುಡು ದುಡನೆ ನಡೆದು ಮನೆಯ ಬಳಿ ಬಂದು ನೋಡಿದಾಗ, ಮನೆಗೆ ಹಾಕಿದ್ದ ಬೀಗ ಹಾಗೆಯೇ ಇತ್ತು. ಸದ್ಯ ಅವರಿನ್ನು ವಾಪಸ್ಸು ಬಂದಿಲ್ಲ ಎಂದುಕೊಂಡು, ನಿತ್ಯದಂತೆ ಪಕ್ಕದ ಮನೆಗೆ ಕೊಟ್ಟಿದ್ದ ಬೀಗದ ಕೈಯನ್ನು ಕೇಳಿ ತೆಗೆದುಕೊಂಡು ಬಾಗಿಲಿಗೆ ಹಾಕಿದ್ದ ಬೀಗವನ್ನು ತೆಗೆಯುತ್ತಿದ್ದಾಗ ಪಕ್ಕದ ಮನೆಯ ಹೆಂಗಸು ಇವಳನ್ನೇ ವಿಚಿತ್ರವಾಗಿ ನೋಡುತ್ತಿರುವಂತೆ ಅನ್ನಿಸಿತು. ಸರ್‍ರನೆ ಒಳಗೆ ನುಗ್ಗಿ ಬಾಗಿಲನ್ನು ಹಾಕಿಕೊಂಡು, ಮೊದಲು ಸೀರೆಯನ್ನು ಬದಲಾಯಿಸಿ, ಬೇರೆ ಸೀರೆ ಉಟ್ಟು ಮುಖ ತೊಳೆದು ಬಂದಳು. ಏನೂ ನಡೆದಿಲ್ಲವೆಂಬಂತೆ ಮುಖ ಮಾಡಿ ಗಂಡನ ಬರುವನ್ನೇ ನಿರೀಕ್ಷಿಸುತ್ತಾ ಕುಳಿತಳು.

ಆ ರಾತ್ರಿಯೂ ಗಂಡ ಊರಿಗೆ ಬರದಿದ್ದಾಗ, ಬೆಳಿಗ್ಗೆ ಮಾಡಿ ಮಿಕ್ಕಿದ್ದ ಅನ್ನ ಸಾರು ಕಲೆಸಿ, ತಿಂದು, ಮಲಗುವ ಸಿದ್ಧತೆಯನ್ನು ನಡೆಸಿದಳು.

"ಇವರು ಹೀಗೇನೇ .....ಟೂರ್ ಅಂತ ಆಗಾಗ್ಗೆ ಹೊರಗೆ ಈ ತಿರುಗಾಡುತ್ತಿರುತ್ತಾರೆ. ನಾನು ಮನೇಲಿ ಒಬ್ಬಳೇ ಹೇಗಿರ್ತೀನಿ ಅನ್ನುವ ಚಿಂತೇನಾದ್ರೂ ಬೇಡವೆ ? ಥೂ ಏನು ಗಂಡಸರೋ.... ಇಂಥವರಿಗೆ ಮದುವೆ ಯಾಕೋ ! ಸಂಸಾರವೇಕೋ ? " ಮನದಲ್ಲೇ ಬೈದುಕೊಂಡಳು. ಸಂಸಾರ ? ಏನಿದೆ ಈ ಸಂಸಾರದಲ್ಲಿ ? ಮದುವೆಯಾಗಿ ಹತ್ತು ವರ್ಷವಾಯ್ತು. ಏನೂ ಬದಲಾವಣೆ ಇಲ್ಲ, ಬರೀ ಅಡಿಗೆ ಮನೆ ಕೆಲಸ, ಮನೆ ಕೆಲಸದಲ್ಲಿ ನಾನು ..! ಆಫೀಸು, ಟೂರು ಅಂತ ಇವರು !! ಒಂದು ದಿನವಾದರೂ ನಿನಗೆ ಬೇಜಾರೇ ಅಂತ ಕೇಳಿಲ್ಲವಲ್ಲ, ನನಗೇನು ಕಮ್ಮಿ ಬೇಜಾರೇ ....? ನನ್ನ ಜತೆಯಲ್ಲಿ ಮದುವೆ ಯಾದವರಿಗೆಲ್ಲ ಎರಡೆರಡು ಮಕ್ಕಳಿದಾರೆ ನನಗೆ! ಮಕ್ಕಳ ಮಾತು ಆಡಿದರೆ ಸಾಕು.... ಮುಂಚೆಯೆಲ್ಲ ಏನೇನೋ ತಮಾಷೆ ಮಾತನಾಡಿ ಮಾತನ್ನು ಮರೆಸುತ್ತಿದ್ದರು.... ಆಗುತ್ತೆ ಬಿಡು....ನಾನೇನು ಮುದುಕನಾಗಿ ಬಿಟ್ಟೆನೆ ಅಂತ.... ಹೇಳಿ ಬಾಯನ್ನು ಮುಚ್ಚಿಸುತ್ತಿದ್ದರು.

ಆದರೆ ಈಗ ? ನಾವು ಮುದುಕರಾಗ್ತಾ ಇಲ್ಲವೆ ? ನನ್ನ ಒತ್ತಾಯಕ್ಕೆ ಡಾಕ್ಟರ ಹತ್ತಿರ ಹೋಗಿ ಬಂದಾಯ್ತು... ವ್ರತ, ಕಥೆ, ಹರಕೆ ಇದರಲ್ಲಿ ನಂಬಿಕೆ ಇಲ್ಲವಂತೆ. ಆ ಮಾತನ್ನು

ಎತ್ತಿದರೆ ಸಾಕು, ಒಂದು ದೊಡ್ಡ ಹಗರಣ ಖಂಡಿತಾ. ಮನಸ್ಸು ಮುದುಡಿತು. ಕಣ್ಣುಗಳನ್ನು ಮುಚ್ಚಿ ಕುಳಿತಳು. ಗಂಡನ ಬಗ್ಗೆ ಯೋಚಿಸಲೂ ಬೇಸರವಾಯಿತು.

* * * *

ದಿನೇಶ ಸೀದಾ ಅಣ್ಣನ ಮನೆಗೆ ಬಂದ. ಸ್ವಲ್ಪ ಹೊತ್ತಿನ ನಂತರ ಹೊರಟ.

''ನನ್ನ ಕಲೀಗ್ಸ್ ಇಬ್ಬರನ್ನು ಊಟಕ್ಕೆ ಕರೆದಿದೀನಿ. ಹೇಗೂ ಬಂದಿದೀಯ ಇದ್ದು ಬೆಳಿಗ್ಗೆ ಹೋಗೂವಂತೆ'' ಅಣ್ಣನೆಂದ. ಅವನು ಮಾರ್ಕೆಟ್ಟಗೆ ಹೊರಟಿದ್ದ.

ಅಣ್ಣನ ಮಾತಿಗೆ ಇಲ್ಲವೆನ್ನಲಾಗದೇ ದಿನೇಶ ಒಪ್ಪಿದ.

''ಕಾರಿದೆ. ಡ್ರೈವರಿದಾನೆ. ನಿನಗೇನೇನು ಬೇಕೋ, ಎಲ್ಲಾ ಈಗಲೇ ಹೇಳಿ ಬಿಡು. ಒಟ್ಟಿಗೇ ತಂದು ಬಿಡೋಣ'' ಅಣ್ಣ ಅತ್ತಿಗೆಯೊಡನೆ ನುಡಿದಾಗ ದಿನೇಶ ಮುಗುಳ್ನಕ್ಕ. ''ನಾನೂ ಬರ್ತೀನಿ.... ನಾನೂ ಬರ್ತೀನಿ'' ಎಂದು ಮಕ್ಕಳು ಒಟ್ಟಿಗೇ ಕಿರುಚಿದರು.

ಕೆಲವೇ ನಿಮಿಷಗಳಲ್ಲಿ ಅತ್ತಿಗೆ ಕೊಟ್ಟ ಪಟ್ಟಿಯೊಡನೆ ದಿನೇಶ ತನ್ನ ಅಣ್ಣ ಹಾಗೂ ಮಕ್ಕಳೊಡನೆ ಮಾರ್ಕೆಟ್ಟಿಗೆ ಹೊರಟ.

ರಾತ್ರಿಎಂಟು ಗಂಟೆಯ ಹೊತ್ತಿಗೆ, ಆ ಸಹೋದ್ಯೋಗಿಗಳು ಬರುವ ಮೊದಲೇ, ಗೀತ ಮಕ್ಕಳಿಗೆ ಊಟ ಬಡಿಸಿದಾಗ, ದಿನೇಶ ಸಂಕೋಚವಿಲ್ಲದೇ ನುಡಿದಿದ್ದ.

''ಅತ್ತಿಗೆ ನನಗೂ ಬಡಿಸಿಬಿಡಿ. ನನಗೂ ಹೊಟ್ಟೆತುಂಬಾ ಹಸಿದಿದೆ.''

'ಏಕೆ ?' ಎಂದು ಗೀತ ಕೇಳಲಿಲ್ಲ. ಅವನಿಗೆ ಯಾರೋ ಹೊರಗಿನವರ ಜತೆ ಬೆರೆತು ಊಟ ಮಾಡುವ ಮನಸ್ಸಿಲ್ಲ ಎಂದು ಅರಿತಳು. ರುಚಿಯಾದ ಊಟವನ್ನು ಮುಗಿಸಿ, ಮಕ್ಕಳೊಡನೆ ಅವರ ರೂಮು ಸೇರಿದ.

ಮಕ್ಕಳನ್ನು ತಮಾಷೆ ಮಾಡಿ ರೇಗಿಸಿ ಆನಂದ ಪಡುತ್ತಾ ಮಲಗಿದ್ದವನನ್ನು ಅಣ್ಣ ಕರೆದ.... ಎಲ್ಲರ ಊಟ ಮುಗಿದಿತ್ತೆಂದು ತಿಳಿಯಿತು. ಹೊರಗೆ ಬಂದವನನ್ನು, ಅಣ್ಣ ತನ್ನ ಸಹೋದ್ಯೋಗಿಗಳಿಗೆ ಪರಿಚಯಿಸಿದ.

''ಇವನು ನನ್ನ ತಮ್ಮ ದಿನೇಶ.... ಇವರಿಬ್ಬರೂ ನನ್ನ ಕಲಿಂಗ್ಸ್ ಹೊಸದಾಗಿ ಮದುವೆಯಾದವರು. ಹನಿಮೂನ್ ಮುಗಿಸಿಕೊಂಡು, ನೆನ್ನೆ ತಾನೇ ಬಂದಿದಾರೆ.....'' ಅಣ್ಣ ಅಗತ್ಯಕ್ಕಿಂತ ಹೆಚ್ಚಿನ ದನಿಯಲ್ಲಿ ನಕ್ಕಾಗ, ದಿನೇಶನಿಗೆ ನಗಬೇಕೆನಿಸಲಿಲ್ಲ. ಇಬ್ಬರಿಗೂ ಕೈ ಮುಗಿದು 'ನಮಸ್ಕಾರ' ಎಂದ.

ಹೊಸದಾಗಿ ಮದುವೆಯಾದ ದಂಪತಿಗಳಿಗೆ ಅವನ ಬಗ್ಗೆ ತಿಳಿದುಕೊಳ್ಳುವ ಕುತೂಹಲವಿರಲಿಲ್ಲವೇನೋ, ಮನೆಗೆ ಹೊರಡುವ ಆತುರದಲ್ಲಿದ್ದರು.

ದಿನೇಶ ತನ್ನಲ್ಲೇ ನಕ್ಕು ರೂಮಿಗೆ ವಾಪಸ್ಸಾದ. ಬೆಚ್ಚಗೆ ಹೊದ್ದು ಮಲಗಿದ್ದ ಮಗಳ ಬಳಿ ಕುಳಿತು ಅವಳ ತಲೆ ನೇವರಿಸಿದ. ಮನಸ್ಸು ಹಿಂದಿನ ದಿನಗಳನ್ನು ಮೆಲುಕು ಹಾಕಿತು.

ಎಂ.ಎಸ್ಸಿ ಮುಗಿಸಿ ಅಣ್ಣ ಕಾಲೇಜು ಲೆಕ್ಚರರ್ ಆಗಿದ್ದ. ಇಂಜಿನಿಯರಿಂಗ್ ಮುಗಿಸಿ, ಇವನು ಮಿಲಟರಿ ಸೇರಿದ್ದ. ಚಿಕ್ಕ ವಯಸ್ಸಿನಲ್ಲೇ ತಂದೆ ತಾಯಿಗಳನ್ನು ಕಳೆದುಕೊಂಡಿದ್ದ ಅಣ್ಣ ತಮ್ಮಂದಿರು ಸೋದರ ಮಾವನ ಮನೆಯಲ್ಲಿ ಬೆಳೆದಿದ್ದರು. ಸೋದರ ಮಾವನ ಮಗಳು ಗೀತನ್ನ ಅಣ್ಣ ಮದುವೆಯಾದ. ಆ ಮದುವೆಯಲ್ಲಿ ಅವನಿಗೆ ಅಲಕಾಳ ಪರಿಚಯವಾದದ್ದು. ಗೀತಳ ಸ್ನೇಹಿತೆಯ ತಂಗಿ ಅಲಕಾ ನೋಡಲು ಚೆನ್ನಾಗಿದ್ದು ಸ್ಮಾರ್ಟ್ ಆಗಿದ್ದಳು. ಅವನನ್ನು ಆಕರ್ಷಿಸಿದ್ದಳು. ಪರಿಚಯ ಸ್ನೇಹವಾಗಲು ತಡವಾಗಲಿಲ್ಲ. ರಜ ಮುಗಿಸಿ ಊರಿಗೆ ಹೊರಡುವ ಮುನ್ನ ಗೀತಳೊಡೆ ತನ್ನ ಆಸೆಯನ್ನು ವ್ಯಕ್ತಪಡಿಸಿದ್ದ.

''ಗೀತ ನಿನ್ನ ಸ್ನೇಹಿತೆಯ ತಂಗಿ. ಅಲಕಾ ನನಗೆ ಹಿಡಿಸಿದ್ದಾಳೆ. ನಮ್ಮಿಬ್ಬರ ಮದುವೆ ಮಾಡಿಸುವ ಜವಾಬ್ದಾರಿ ನಿಂದು'' ಎಂದಿದ್ದ.

ಗೀತ ಒಪ್ಪಿದ್ದಳು. ದಿನೇಶನ ಮೇಲಿನ ಮಮತೆಯಿಂದ ಅಣ್ಣ ಅತ್ತಿಗೆ, ಅಲಕಾಳನ್ನು ಮದುವೆಗೆ ಒಪ್ಪಿಸಿದ್ದರು. ಕೆಲವೇ ದಿನಗಳಲ್ಲಿ ಅವರಿಬ್ಬರ ಮದುವೆ ನೆರವೇರಿತು.

ಸ್ನೇಹದಿಂದ ವರ್ತಿಸಿದ್ದು, ಚುರುಕಾಗಿದ್ದ ಅಲಕಾ, ತನ್ನ ಹೆಂಡತಿಯಾದದ್ದು ತನ್ನ ಸೌಭಾಗ್ಯವೆಂದೇ ಭಾವಿಸಿದ್ದ ದಿನೇಶನಿಗೆ, ಅವಳು ತನ್ನನ್ನು ಪ್ರೀತಿಸುತ್ತಿಲ್ಲವೆಂದು ತಿಳಿಯಲು ತಡವಾಗಲಿಲ್ಲ. ಅವಳ ಮನಸ್ಸಿನಲ್ಲಿ ಏನಿದೆ ಎಂದು ತಿಳಿದುಕೊಳ್ಳಲು ಪ್ರಯತ್ನಿಸಿದ.

''ನನಗೆ ಈಗಲೇ ಮದುವೆ ಇಷ್ಟವಿರಲಿಲ್ಲ. ಹಿರಿಯರ ಬಲವಂತಕ್ಕೆ ಒಪ್ಪಿ ಮದುವೆಯಾದೆ. ನನ್ನನ್ನೇನೂ ಕೇಳಬೇಡಿ'' ಎಂದಿದ್ದಳು. ಕ್ರಮೇಣ ಅವನ ಸ್ವಭಾವ ಅವಳ ಸ್ವಭಾವಕ್ಕೆ ತದ್ವಿರುದ್ಧ ಎಂದು ತಿಳಿದು ಬಂತು. ಅವಳಿಗೆ ಮನೆ ಕೆಲಸಗಳಲ್ಲಿ ಆಸಕ್ತಿ ಇರಲಿಲ್ಲ. ಸದಾ ಸಿನಿಮಾ, ಕ್ಲಬ್ಬು ಎಂದು ಮನೆಯ ಹೊರಗೇ ತಿರುಗಾಡುವ ಆಸೆಯನ್ನು ವ್ಯಕ್ತಪಡಿಸಿದ್ದಳು. ಹೆಂಡತಿಯ ಮನಸ್ಸನ್ನು ನೋಯಿಸುವ ಇಚ್ಛೆ ಇಲ್ಲದೇ ಸುಮ್ಮನಿರುತ್ತಿದ್ದ. ಅವಳ ಆಸೆಗೆ ಅವಳನ್ನು ಬಿಟ್ಟಿದ್ದ.

ಈ ಸಮಯದಲ್ಲೇ ಅವಳು ಗರ್ಭಿಣಿ ಎಂದು ತಿಳಿದಾಗ ಅವನಿಗೆ ಖುಷಿಯಾಗಿತ್ತು. ತಾನು ಬಯಸಿ ಮದುವೆಯಾದ ತನ್ನ ಮುದ್ದು ಮಡದಿ ತಾಯಿಯಾಗುತ್ತಿದ್ದಾಳೆಂದು ತಿಳಿದು ಸಂಭ್ರಮಪಟ್ಟ. ಆದರೆ ಅವನ ಸಂಭ್ರಮಕ್ಕೆ ಯಾವ ಉತ್ಸಾಹವನ್ನೂ ತೋರಲಿಲ್ಲ... ಮುಖವನ್ನು ಊದಿಸಿಕೊಂಡಿದ್ದಳು

''ನನಗೆ ಮದುವೇನೇ ಇಷ್ಟವಿರಲಿಲ್ಲ. ಇನ್ನು ಈ ಮಗು ಯಾರಿಗೆ ಬೇಕಾಗಿದೆ'' ಎಂದೇ ಆಡಿದ್ದಳು. ಅವಳ ನುಡಿಗಳು ಕರ್ಕಶವಾಗಿ ಕೇಳಿಸಿದ್ದವು.

''ಹಾಗೆನ್ನಬೇಡ ಅಲಕಾ. ನನಗೆ ಮಕ್ಕಳು ಎಂದರೆ ತುಂಬಾ ಇಷ್ಟ ನಮ್ಮ ಮಗು ನಮ್ಮಿಬ್ಬರ ಪ್ರೀತಿಯನ್ನು ಹೆಚ್ಚಿಸುತ್ತೆ....'' ಅವಳನ್ನು ಮುದಗೊಳಿಸಲು ಪ್ರಯತ್ನಿಸಿದ್ದ. ಆದರೆ ಅವನ ಮಾತಿಗೆ ಏನೂ ಹೇಳದೆ ಸುಮ್ಮನಾಗಿದ್ದಳು.

ಹೆರಿಗೆಗೆ ಮೂರು ತಿಂಗಳು ಬಾಕಿ ಇದೆ ಎನ್ನುವಾಗ ತಾನೇ ಖುದ್ದಾಗಿ ಅವಳನ್ನು ಅವಳ ತಾಯಿಯ ಮನಗೆ ಕರೆತಂದು ಬಿಟ್ಟಿದ್ದ. ಅಣ್ಣ ಅತ್ತಿಗೆ ಅವನ ಸಂಭ್ರಮ ಕಂಡು ಸಂತೋಷಗೊಂಡಿದ್ದರು. ಅದೇ ಸಮಯದಲ್ಲಿ ಗೀತ ಸಹ ಗರ್ಭಿಣಿಯಾಗಿದ್ದನ್ನು ಗಮನಿಸಿದ್ದ. ಅತ್ತಿಗೆಯ ಸಂತಸದ ಮುಖ ಕಂಡು ಅಲಕಳ ಉದಾಸೀನದ ಮುಖ ಜಿಗುಪ್ಸೆ ಎನಿಸಿತ್ತು. ಅದೇ ಕೊರಗನ್ನು ಗೀತಳಲ್ಲಿ ಹೇಳಿದ್ದ.

"ಅತ್ತಿಗೆ, ನಿಮ್ಮಷ್ಟು ಅವಳು ಖುಷಿಯಾಗಿಲ್ಲವಲ್ಲ ಏಕೆ ? "ಎಂದು ಕೇಳಿದ್ದ. ಅದಕ್ಕೆ ಗೀತ ಉತ್ತರಿಸಿದ್ದಳು.

"ಒಬ್ಬೊಬ್ಬರ ಮನಸ್ಸು ಒಂದೊಂದು ತರಹ ಇರುತ್ತೆ. ಮಗು ಹುಟ್ಟಿದ ಮೇಲೆ ಈ ಉದಾಸೀನ ಪಡುಕ್ಕೆ ಪುರಸೊತ್ತು ಇರುಲ್ಲ ನೋಡ್ತಿರು" ಸಮಾಧಾನ ಹೇಳಿದ್ದಳು. ಇರಬಹುದೇನೋಎಂದುಕೊಂಡು ಊರಿಗೆ ವಾಪಸ್ಸಾಗಿದ್ದ.

ಕೆಲವೇ ದಿನಗಲಲ್ಲಿ ಗೀತನಿಗೆ ಹೆಣ್ಣುಮಗುವಾದ ಸುದ್ದಿ ಕೇಳಿ ಸಂತೋಷವಾಗಿತ್ತು. ಹೆಂಡತಿ ಈಗ ಹೇಗಿರುವಳೋ ಎಂಬ ಚಿಂತೆಯಲ್ಲೇ ಹಗಲು ರಾತ್ರಿಗಳನ್ನು ಕಳೆದ.... ಅವನು ಬರೆದ ಪತ್ರಗಳಿಗೆ ಅವಳಿಂದ ಉತ್ತರ ಬಂದಿರಲಿಲ್ಲ. ಅದನ್ನು ಅವನು ನಿರೀಕ್ಷಿಸಿದ್ದ. ಕಡೆಗೂ ಆ ದಿನ ಬಂದಿತು.ಅಲಕಳಿಗೆ ಹೆಣ್ಣು ಮಗುವಾಗಿದೆ ಎಂಬ ಟೆಲಿಗ್ರಾಂ ತಲುಪಿದ ಕೂಡಲೇ ಊರಿಗೆ ಹೊರಟ.

ಇವನನ್ನು ಕಂಡು ಅಲಕಾ ಮುಖವನ್ನರಳಿಸಲಿಲ್ಲ. ಯಾವ ಮಾತನ್ನೂ ಆಡಲಿಲ್ಲ. ಸುಸ್ತಾಗ್ತಿರಬಹುದೇನೋ ಎಂದುಕೊಂಡು ಇವನೇ ಸಂತೋಷವನ್ನು ವ್ಯಕ್ತಪಡಿಸಿ 'ಕಂಗ್ರಾಟ್ಸ್' ಎಂದ. ಅವಳು ನಿದ್ದೆ ಬಂದವಳಂತೆ ಕಣ್ಣುಗಳನ್ನು ಮುಚ್ಚಿದಳು. ಮಗುವನ್ನು ಮನಸಾರೆ ನೋಡಿದ. ಅಲ್ಲಿಂದ ಅಣ್ಣನ ಮನೆಗೆ ಬಂದ. ಎರಡು ತಿಂಗಳ ಮುದ್ದಾದ ಮಗುವನ್ನು ಎತ್ತಿಕೊಂಡು, ಗೀತ ಅವನನ್ನು ಸ್ವಾಗತಿಸಿದಳು.

ಈ ನಡೆವಳಿಕೆ ನನ್ನ ಹೆಂಡತಿಗೇಕೆ ಇಲ್ಲ ಎಂದು ಮನಸ್ಸು ಕುಗ್ಗಿತು. ಗೀತ ಕೇಳಿದ್ದಕ್ಕೆಲ್ಲ ಉತ್ತರಿಸಿದ.

ಅಲಕಾ ಆಸ್ಪತ್ರೆಯಿಂದ ಮನೆಗೆ ಬಂದಮೇಲೆ, ಬಂದೆರಡು ದಿನಗಳ ನಂತರ ಹೊರಟ. ಏಕೋ ಏನೋ ಅವಳು ಮಗುವನ್ನು ಗಮನಿಸುತ್ತಿಲ್ಲವೆಂಬ ಅನುಮಾನ ಮೂಡಿತ್ತು. ಹೊರಡುವ ಮುಂಚೆ ಹೇಳಿದ್ದ.

"ಮಗೂನ ಚೆನ್ನಾಗಿ ನೋಡಿಕೊಳ್ಳಬೇಕು. ನಿನಗೆ ಗೊತ್ತಿಲ್ಲದಿದ್ದರೆ ನಿನ್ನ ತಾಯಿಯನ್ನು ಕೇಳು. ಅತ್ತಿಗೆಯನ್ನು ಕೇಳು ಹೇಳ್ತಾರೆ. ಆದರೆ ತಾತ್ಸಾರ ಮಾತ್ರ ಮಾಡಬೇಡ " ಎಂದು ಅಪ್ಪಣೆಯ ಧ್ವನಿಯಲ್ಲಿ ಹೇಳಿದ್ದ.

ಅವಳು ಹೂಂ ಎನ್ನದೆ ವಿಚಿತ್ರವಾಗಿ ನಕ್ಕಿದ್ದಳು.

* * * *

ಅವನು ಊರಿಗೆ ವಾಪಸ್ಸು ಹೊರಟು ಹೋಗಿದ್ದ ಒಂದು ವಾರ ಕಳೆದ ನಂತರ ಒಂದಿ ದಿನ ಇದ್ದಕ್ಕಿದ್ದಂತೆ 'ಈಗಲೇ ಹೊರಟುಬಾ' ಎಂಬ ಫೋನ್ ಮೆಸೇಜ್ ಸಿಕ್ಕಿದೊಡನೇ ಗಾಬರಿಯಿಂದ ಹೊರಟು, ಸೀದಾ ಅಣ್ಣನ ಮನೆಗೆ ಬಂದ.

ಅಣ್ಣ, ಗೀತ ಇಬ್ಬರೂ ನಡೆದ ವಿಚಾರ ತಿಳಿಸಿದ್ದರು.

"ನಿನ್ನ ಹೆಂಡತಿ, ಮನೆ ಬಿಟ್ಟು ಹೊರಟು ಹೋಗಿದಾಳೆ, ಎಲ್ಲಿ ಹೋಗಿದಾಳೆ ಅಂತ ಇದುವರೆಗೂ ತಿಳಿದಿಲ್ಲ, ಮೂರು ದಿನವಾಯ್ತು."

ದಿನೇಶ ಕುಸಿದು ಕುಳಿತ. ಹೆಂಡತಿ ಹೀಗೆ ಏನಾದರೂ ಮಾಡಬಹುದು ಎಂಬ ಅನುಮಾನ ಅವನಿಗೆ ಖಂಡಿತಾ ಇರಲಿಲ್ಲ. ಅವಳೇಕೆ ಹೀಗೆ ಮಾಡಿದಳು ! ಯಾರ ಜತೆ ಓಡಿಹೋಗಿದ್ದಾಳೆ ಎಂದು ಕೇಳುವ ತವಕವಾದರೂ ತಡೆದುಕೊಂಡ. ಸುಮ್ಮನೆ ಕುಳಿತ ಅವನನ್ನೇ ಗಾಭರಿಯಿಂದ ನೋಡಿದ ಅಣ್ಣ ಅಲುಗಾಡಿಸಿ ಮಾತನಾಡಿಸಿದ್ದ. ಸಂತೈಸುವ ದನಿಯಲ್ಲಿ ನುಡಿದ.

"ಯೋಚನೆ ಮಾಡಬೇಡ. ಎಲ್ಲಿದ್ದರೂ ಹುಡುಕಿಸೋಣ."

"ಹುಡುಕಿಸುವುದೇನೂ ಬೇಡ. ಅವಳು ಸಿಕ್ಕರೂ, ಅವಳೊಡನೆ ಸಂಸಾರ ಮಾಡಲು ಆಗುವುದಿಲ್ಲ. ಅವಳಿಗೆ ಈ ಮದುವೆ ಬೇಕಿರಲಿಲ್ಲ. ಈ ಮಗು ಬೇಕಿರಲಿಲ್ಲ. ಬಲವಂತವಾಗಿ ಅವಳನ್ನು ತಂದಿರಿಸಿಕೊಂಡು ನಾನು ಯಾವ ನೆಮ್ಮದಿಯನ್ನು ಕಂಡೇನು ! ಇನ್ನು ಅವಳು ನನ್ನ ಪಾಲಿಗೆ ಸತ್ತಂತೆ. ಆ ಮಗು ನನ್ನದು. ನನಗೇ ಬೇಕು. ಆದರೆ ನಾನು ಆ ಮನೆಗೆ ಹೋಗಲಾರೆ. ದಯವಿಟ್ಟು ನೀವಿಬ್ಬರೂ ಹೋಗಿ ಆ ಮಗುವನ್ನು ಕರೆದುಕೊಂಡು ಬನ್ನಿ." ಅಣ್ಣನ ಕೈ ಹಿಡಿದು ಕೇಳಿಕೊಂಡ.

"ಆ ಮಗು ಇನ್ನು ಚಿಕ್ಕದಲ್ಲೋ.... ನೀನು ಹೇಗೆ ಸಾಕ್ತೀಯಾ ?"

"ಯಾಕೆ ನೀವುಗಳು ಇದೀರಲ್ಲ, ಅತ್ತಿಗೆ ನನಗೋಸ್ಕರ ಇಷ್ಟು ಮಾಡ್ತೀರಿ ತಾನೇ ... ಒಂದು ಮಗುವನ್ನು ಸಾಕುವ ಜತೆಗೆ ಇನ್ನೊಂದು ಮಗುವನ್ನು ಸಾಕುವುದು ನಿಮಗೆ ಕಷ್ಟವಾಗಲಾರದು ಅಲ್ವಾ ?" ದೈನ್ಯತೆಯ ದನಿ ಅಡಗಿತ್ತು.

ಗಂಡ ಹೆಂಡತಿ ಇಬ್ಬರೂ ಮುಖ ಮುಖ ನೋಡಿಕೊಂಡರು. ದಿನೇಶನ ಮನಸ್ಸಿಗೆ ಆದ ಆಘಾತದ ಅರಿವು ಅವರಿಗಾಗಿತ್ತು.

ನೀನೇನೂ ಯೋಚನೆ ಮಾಡಬೇಡ ದಿನೇಶ. ಇನ್ನು ಮೇಲೆ ಅದು ನಮ್ಮ ಮಗು ಎಂದಿದ್ದರು ಇಬ್ಬರೂ ಒಟ್ಟಿಗೆ. ಪೆಚ್ಚಾಗಿ ನಕ್ಕಿದ್ದ ದಿನೇಶ.

ಅಲಕಾಳ ತಂದೆ ತಾಯಿ ಯಾವ ಅನುಮಾನವನ್ನು ಸಂಕೋಚವನ್ನೂ ವ್ಯಕ್ತಪಡಿಸದೇ ಮಗುವನ್ನು ಅವರ ಕೈಗಿತ್ತಿದ್ದರು. ತಮ್ಮ ಮನೆಗೆ ತಂದರು. ದಿನೇಶ ಮಗುವನ್ನು ಕೈಗೆತ್ತಿಕೊಂಡು ಮುದ್ದಿಸಿದ್ದ, ಮರುಗಳಿಗೆಯಲ್ಲಿ ಅತ್ತಿಗೆಯ ಕೈಗೆ ಕೊಟ್ಟು ನುಡಿದಿದ್ದ.

''ಅತ್ತಿಗೆ ಇವತ್ತಿನಿಂದ ಈ ಮಗುವಿಗೆ ನೀವೇ ತಾಯಿ. ನಿಮ್ಮದೇ ಎಲ್ಲಾ ಜವಾಬ್ದಾರಿ. ನಾನಿನ್ನು ಬರ್ತೀನಿ'' ಎಂದು ಹೇಳಿ, ಬಾಗಿ ಅತ್ತಿಗೆಯ ಕಾಲಿಗೆ ನಮಸ್ಕರಿಸಿದ. ಅವರುಗಳು ತಡೆದರೂ ಅಲ್ಲಿಂದ ಹೊರಟಿದ್ದ.

ನೇರ ತನ್ನ ಊರಿಗೆ ವಾಪಸ್ಸಾಗಿ ಕೆಲಸಕ್ಕೆ ಹಾಜರಾದರೂ, ಏನೋ ಬೇಸರ. ಏನೋ ಕೊರಗು. ಒಮ್ಮೊಮ್ಮೆ ಉದ್ವೇಗಕ್ಕೆ ಒಳಗಾದವನಂತೆ ಬಡಬಡಿಸುತ್ತಿದ್ದ. ಕೇಳಿದವರಿಗೆ ಹೆಂಡತಿ ಸತ್ತುಹೋದಳು ಎಂದಷ್ಟೇ ತಿಳಿಸಿದ್ದ.

''ರಜ ಹಾಕಿ, ಎಲ್ಲಾದರೂ ಸುತ್ತಾಡಿ ಬಾ. ಮನಸ್ಸಿಗೆ ನೆಮ್ಮದಿ ಸಿಗುತ್ತೆ'' ಎಂದು ಹಿರಿಯ ಅಧಿಕಾರಿ ಸಲಹೆ ನೀಡಿದ್ದರು. ಇವ್ನ ರಜೆ ಹಾಕಿ ಹೋಗುವುದಾದರೂ ಎಲ್ಲಿಗೆ ? ಅದೂ ಒಬ್ಬನೇ.... ಕಡೆಗೆ ಯೋಚಿಸಿ ಒಂದು ತೀರ್ಮಾನಕ್ಕೆ ಬಂದಿದ್ದ. ಕೆಲಸಕ್ಕೆ ರಾಜೀನಾಮೆ ಕೊಟ್ಟು ತನ್ನ ಊರಿಗೆ ವಾಪಸ್ಸು ಹೊರಟ.

ಕೆಲವೇ ದಿನಗಳಲ್ಲಿ ಮತ್ತೆ ವಾಪಸ್ಸು ಬಂದ ದಿನೇಶನನ್ನೇ ಬೆರಗಾಗಿ ನೋಡಿದರು ಅಣ್ಣಅತ್ತಿಗೆ. ಅವರು ಪ್ರಶ್ನಿಸದಿದ್ದರೂ ತಾನೇ ಹೇಳಿದ್ದ.

''ನನಗ್ಯಾಕೋ ನೆಮ್ಮದಿಯೇ ಇಲ್ಲವಾಗಿದೆ. ಅದಕ್ಕೆ ರಾಜೀನಾಮೆ ಕೊಟ್ಟು ಬಂದುಬಿಟ್ಟೆ'' ಎಂದಿದ್ದ.

ಇಬ್ಬರೂ ತಕ್ಷಣಕ್ಕೆ ಏನು ಹೇಳದಿದ್ದರೂ ಆತಂಕವಾಗಿತ್ತು.

''ನೀವು ಗಾಬರಿಯಾಗಬೇಡಿ. ನನಗೂ ಸೋಮಾರಿಯಾಗಿ ಕೂತು ಕಾಲ ಕಳೆಯಲು ಇಷ್ಟವಿಲ್ಲ. ಅದಕ್ಕೇ ಒಂದು ತೀರ್ಮಾನಕ್ಕೆ ಬಂದಿದೀವಿ. ನಮ್ಮ ತಾತನ ತೋಟ ಇತ್ತಲ್ಲ... ಅದನ್ನು ನೋಡ್ಕೊಂತೀನಿ... ಅಲ್ಲೇ ಇದ್ದು ಬಿಡ್ತೀನಿ.''

''ಅಂದರೇ, ವ್ಯವಸಾಯ ಮಾಡ್ತೀಯ... ಆಗುತ್ತೇನೋ ?''

''ಹುಂ... ಯಾಕಾಗಬಾರದು ! ಯಾರೋ ನೋಡಿಕೊಳ್ಳುತ್ತಿದ್ದಾರಲ್ಲ. ಅದನ್ನು ನಾನೇ ಸ್ವಂತ ಮಾಡಿಸ್ತೀನಿ. ಅಲ್ಲೇ ಒಂದು ಮನೆ ಕಟ್ಟಿಕೊಂಡು ವಾಸವಾಗಿರ್ತೀನಿ.

''ಅಲ್ಲಿ? ಕಾಡ್ನಲ್ಲಿ ಹೇಗಿರ್ತೀಯಾ ? '' ಗೀತಾ ಕೇಳಿದಳು.

''ಯಾಕೆ ? ಏನೀಗ ? ನಾವು ಮುಂಚೆ ಇದ್ದದ್ದೇ ಹಳ್ಳೀಲಲ್ವಾ ? ಅದು ಕಾಡಿಗಿಂತ ಕೆಟ್ಟದಾಗಿರಲಿಲ್ವಾ ! ನೀವು ಬೇಕಾದರೆ ಅಲ್ಲೇ ಬಂದು ನನ್ನ ಜತೆಯಲ್ಲೇ ಇದ್ದುಬಿಡಿ..''

''ಬೇಡಪ್ಪಾ, ನಮಗೆ ಈ ಜೀವನ ಒಗ್ಗಿಹೋಗಿದೆ. ಅಲ್ಲದೇ ಸಿಟಿಗೆ ತುಂಬಾ ದೂರ ನಿಮ್ಮ ಅಣ್ಣಂಗೆ ಕಾಲೇಜಿಗೆ ದೂರ ಆಗುತ್ತೆ.

''ಒಂದು ಕಾರು ತಗೊಂಡ್ರಾಯ್ತು. ದಿನಾ ಬಂದು ಬಿಟ್ಟು ಹೋಗ್ತೀನಿ.''

ಸರಿ, ಅದೆಲ್ಲ ಆಗದ ಕೆಲಸ. ತೋಟಾನ ಮಾರಿಬಿಟ್ಟು ಏನಾದರೂ ಬಿಸಿನೆಸ್ ಮಾಡು.'' ಅಣ್ಣ ಸಲಹೆಯನ್ನು ಕೊಟ್ಟ.

"ಬಿಸಿನೆಸ್ ನನಗಿಷ್ಟವಿಲ್ಲ. ನಿಮಗೆ ಇಷ್ಟವಿಲ್ಲದಿದ್ದರೆ ಹೇಳಿಬಿಡಿ. ನಾನು ದೇಶಾಂತರ ಹೋಗಿ ಬಿಡ್ತೀನಿ." ರೇಗಿದ್ದ, ಕಾರಣವಿಲ್ಲದೇ.

"ದೇಶಾಂತರ ಹೋಗುವಂಥಾದ್ದೇನಾಯಿತು ಈಗ ? ನಿನಗಿಷ್ಟವಿದ್ದರೆ ಹಾಗೇ ಆಗಲಿ. ಆದರೆ ನಾವು ಮಾತ್ರ ಅಲ್ಲಿ ಬಂದು ಇರುವುದಿಲ್ಲ. ಮಕ್ಕಳು ಚಿಕ್ಕವರು. ಸಮಯ ಅಂದರೆ ಹತ್ತಿರ ಒಬ್ಬರು ಡಾಕ್ಟರು ಸಹ ಸಿಗ್ತಾರೋ ಇಲ್ಲವೋ ? ಮಕ್ಕಳಿಗೆ ತೊಂದರೆ ಯಾಗಬಾರದು...." ಅಣ್ಣ ಖಂಡಿತವಾಗಿ ಹೇಳಿದ.

"ಸರಿ, ನೀವು ಹೇಳೂದೂನು. ಮುಂಚಿನಂತೆ ಕಾಡು ಪ್ರದೇಶವಲ್ಲದಿದ್ದರೂ, ಅನುಕೂಲತೆಗಳು ಇರಲಾರದು. ಸದ್ಯಕ್ಕೆ ನಾನೊಬ್ಬನೇ ಅಲ್ಲಿ ಇರ್ತೀನಿ. ನಾನೇ ಆಗ ಈಗ ಬಂದು ನಿಮ್ಮನ್ನೆಲ್ಲ ನೋಡಿಕೊಂಡು ಹೋಗ್ತೀನಿ."

ಅಲ್ಲಿಗೆ ಎಲ್ಲಾ ನಿರ್ಧಾರವಾಗಿತ್ತು. ಅಣ್ಣ ತಮ್ಮಂದಿರು ಓಡಾಡಿ, ಲಾಯರ ಮುಖಾಂತರ ಮಾತನಾಡಿ, ತೋಟವನ್ನು ತಮ್ಮ ವಶಕ್ಕೆ ಪಡೆದರು. ಕೆಲವೇ ತಿಂಗಳಿನಲ್ಲಿ ಒಂದು ವಾಸಕ್ಕೆ ಮನೆ ಸಹ ಸಿದ್ಧವಾಯಿತು. ಒಂದು ಕಾರನ್ನು ಕೊಂಡುಕೊಂಡ. ತೋಟದಲ್ಲಿ ಸುತ್ತಾಡಲು ಅನುಕೂಲವಾಗುವಂತೆ ರಸ್ತೆಗಳನ್ನು ಮಾಡಿಸಿದ ಒಬ್ಬ ವಾಚ್‌ಮನ್‌ನ್ನು ಗೊತ್ತು ಮಾಡಿ, ಅವನ ಸಂಸಾರಕ್ಕೆಂದು ಒಂದು ಸಣ್ಣ ಮನೆ ಕಟ್ಟಿಸಿಕೊಟ್ಟ

ತನ್ನ ಮನೆಯಲ್ಲಿ ತನಗೆ ಅಗತ್ಯವಾದ ಅನುಕೂಲಗಳನ್ನೆಲ್ಲ ಮಾಡಿಸಿಕೊಂಡ. ಗೃಹಪ್ರವೇಶವಾದ ನಂತರ ಅಣ್ಣ ಅತ್ತಿಗೆ ಹೊರಟು ಹೋದಾಗ ಅವನು ಮತ್ತೆ ಒಂಟಿಯಾದ.

"ಹೇಗೂ ಎಲ್ಲಾಅನುಕೂಲಗಳನ್ನು ಮಾಡಿಕೊಂಡಿದೀಯ. ನಾನೊಂದು ಮಾತು ಹೇಳ್ತೀನಿ. ... ನೀನು ಇನ್ನೊಂದು ಮದುವೆ ಏಕಾಗಬಾರದು!" ಗೀತ ಕೇಳಿದ್ದಳು.

ಅವನು ಸುಮ್ಮನಾದುದನ್ನು ಕಂಡು, ತಾನು ಕೇಳಿದ್ದು ಅನುಚಿತವಾಯ್ತೇನೋ ಎಂದುಕೊಂಡು "ಸಾರಿ ದಿನೇಶ್, ನಿನ್ನ ಮನಸ್ಸನ್ನು ನೋಯಿಸಿದೆ" ಎಂದಳು.

"ಹಾಗೇನಿಲ್ಲ, ಮದುವೆ ಎಂಬ ಮಾತಿನ ಮೇಲೆ ನಂಬಿಕೆಯೇ ಇಲ್ಲವಾಗಿದೆ. ಇಲ್ಲದಿದ್ದರೆ ಹೀಗೇಕಾಗುತ್ತಿತ್ತು ನೀವೇ ಹೇಳಿ" ಸಪ್ಪಗೆ ಹೇಳಿದ.

ನಡೆದಿದ್ದನ್ನು ಮರೆಯಲು ಪ್ರಯತ್ನಿಸು, ಎಷ್ಟು ದಿನ ಹೀಗೆ ಒಬ್ಬನೇ ಅಂತ ಇರ್ತೀಯ?" ಅಣ್ಣ ಪ್ರಶ್ನಿಸಿದ್ದ.

"ಆಗಲಿ ನೋಡೋಣ. ನನ್ನ ಮನಸ್ಸು ಬದಲಾಯಿಸಿದ ದಿನ ನಾನಾಗಿಯೇ ತಿಳಿಸ್ತೀನಿ. ನಿಮ್ಮಂತಹ ಗುಣದ , ಸ್ವಭಾವದ ಹುಡುಗೀನ ನೀವೇ ಆರಿಸಿ. ನಾನು ಕಣ್ಣು ಮುಚ್ಚಿ ಮದುವೆಯಾಗ್ತೀನಿ."

"ನನ್ನನ್ನು ಅಷ್ಟು ಹೊಗಳಬೇಡ. ನನಗೆ ಜಂಭ ಬಂದುಬಿಡುತ್ತೆ"

"ಇಲ್ಲ ಅತ್ತಿಗೆ, ಇದು ಹೊಗಳಿಕೆ, ಆದರೆ ಬರೀ ಬಾಯಿ ಮಾತಲ್ಲ, ಹೃದಯದ ಆಳದಿಂದ ಬಂದಿದ್ದು. ನೀವಿಲ್ಲದಿದ್ದರೆ ನಾನೇನಾಗಿಬಿಡುತ್ತಿದ್ದನೋ... ?"

"ನಿನ್ನ ಜತೆ, ನಾನೂ ಈ ಕಾಡ್ನಲ್ಲಿರಬೇಕಾಗಿತ್ತು" ಎಂದ ಅಣ್ಣ ನಗುತ್ತಾ.

"ಕಾಡು, ಕಾಡು ಅನ್ನಬೇಡ. ಇಲ್ಲಿರುವ ಸೊಗಸು ನಿಮ್ಮ ಸಿಟಿಯಲ್ಲಿಲ್ಲ" ಎಂದ..

"ಸೊಗಸಾದ ಈ ನಾಡಿನಲ್ಲಿ ನಿನ್ನನ್ನು ನೀನೇ ಮರೆತು ಬಿಡಬೇಡ. ಆಗ ಈಗ ನಮ್ಮ ಸಿಟಿಗೂ ಬಂದು ಹೋಗು." ಅಣ್ಣ ನಾಟಕೀಯವಾಗಿ ನುಡಿದಾಗ, ಎಲ್ಲರೂ ಮುದಗೊಂಡರು.

* * * *

ಅಂದಿನಿಂದ ಅವನ ವಾಸಸ್ಥಾನ ಅಲ್ಲಿಯೇ. ವಾರದಲ್ಲಿ ಎರಡು ಮೂರು ಸಲ ಸಿಟಿಗೆ ಹೋಗಿ ಬಂದು ಮಾಡುತ್ತಿದ್ದ. ಈ ಐದಾರು ವರ್ಷಗಳಲ್ಲಿ ಅಲ್ಲಿ ಸಾಕಷ್ಟು ಬದಲಾವಣೆಗಳಾಗಿದ್ದವು. ಸಿಟಿ ಬಸ್ಸು ಹತ್ತಿರದ ಹಳ್ಳಿಗಳಿಗೆಲ್ಲ ಓಡಾಡುತ್ತಿದ್ದವು. ಮಕ್ಕಳಿಬ್ಬರೂ ಪ್ರೈಮರಿ ಸ್ಕೂಲಿಗೆ ಹೋಗಿ ಬರುತ್ತಿದ್ದರು. ಅವನು ಅಲ್ಲಿಗೆ ಹೋದರೂ ತನ್ನ ಮಗುವೆಂದು ವಿಶೇಷ ಪ್ರೀತಿ ತೋರಿಸುತ್ತಿರಲಿಲ್ಲ. ಇಬ್ಬರನ್ನು ಒಂದೇ ರೀತಿ ಮುದ್ದಿಸಿ ಆನಂದ ಪಡುತ್ತಿದ್ದ. ಅತ್ತಿಗೆ ಎರಡೂ ಮಕ್ಕಳನ್ನು ಒಂದೇ ರೀತಿ ಮುದ್ದಿಸಿ ಬೆಳೆಸಿದ್ದನ್ನ ಗಮನಿಸಿದ್ದ. ಅಣ್ಣ ಸಹ ಯಾವ ಭೇದ ಭಾವವನ್ನ ತೋರಿಸಿಲ್ಲವೆಂದು ತಿಳಿದಿದ್ದ. ಕೃತಜ್ಞತೆಯನ್ನು ಕಣ್ಣುಗಳು ಸೂಸುತ್ತಿದ್ದವು.

ಗೀತಳೇ ತನ್ನ ಆಸೆಯಂತೆ ಮಕ್ಕಳಿಗೆ ರಂಜಿನಿ, ನಂದಿನಿ ಎಂದು ಹೆಸರುಗಳನ್ನಿಟ್ಟಿದ್ದಳು. ಮುದ್ದಿಗೆ ರಂಜಿ, ನಂದಿ ಎಂದೇ ಕರೆಯುತ್ತಿದ್ದುದು. ಇಬ್ಬರಿಗೂ ದಿನೇಶ ಚಿಕ್ಕಪ್ಪ. ಚಿಕ್ಕಪ್ಪ ಬಂದನೆಂದರೆ ಸಡಗರ. ಅವನು ಅವರಿಬ್ಬರ ಜತೆ ಸೇರಿ ಬಿಡುತ್ತಿದ್ದ. ಮಕ್ಕಳೊಂದಿಗೆ ಮಕ್ಕಳಾಗಿ ಬಿಡುತ್ತಿದ್ದ.

ಈ ದಿನವೂ ಅವರಿಬ್ಬರ ಮಧ್ಯೆ ಮಲಗಿದ್ದವನಿಗೆ, ನಿದ್ದೆ ಬಾರದೇ ಇದ್ದಾಗ, ಹಿಂದಿನ ದಿನಗಳು ಕನಸಿನಂತೆ ಚಿತ್ರಪಟಲದಲ್ಲಿ ಮೂಡಿ ಹೋದವು. ಎಷ್ಟೋ ದಿನಗಳ ನಂತರ ಮತ್ತೆ ಎಲ್ಲವೂ ನೆನಪಿಗೆ ಬರಲು, ಈ ದಿನದ ಘಟನೆಯೇ ಕಾರಣವೋ, ಅಥವಾ ಹೊಸದಾಗಿ ಮದುವೆಯಾಗಿ ಬಂದು ಮಾತನಾಡಿದ ಆ ದಂಪತಿಗಳೇ ಕಾರಣವೋ ಅವನಿಗೆ ತಿಳಿಯಲಿಲ್ಲ. ತಲೆಯಡಿ ಕೈಗಳನ್ನು ಜೋಡಿಸಿ ಇಟ್ಟು ಆ ದಂಪತಿಗಳಿಬ್ಬರೂ ಬೇಗ ಮನಸ್ಸಿನಿಂದ ಮರೆಯಾದರೂ, ಆ ದಿನ ನಡೆದ ಘಟನೆ, ಅವಳ ಅಸಹಾಯಕ ಸ್ಥಿತಿ ಅವನಿಗೆ ಮತ್ತೆ ಮತ್ತೆ ನೆನಪಿಗೆ ಬಂದು ನಿಲ್ಲುತ್ತಿತ್ತು. ಮಾರನೇ ದಿನವೇ ಅವನು ಎಸ್ಟೇಟ್‌ಗೆ ವಾಪಸ್ಸು ಹೊರಟ. ಅಲ್ಲಿನ ಕೆಲಸ ಕಾರ್ಯಗಳಲ್ಲಿ ತೊಡಗಿದ್ದವನು ನಡೆದ ಘಟನೆಯ ಬಗ್ಗೆ ಮತ್ತೆ ಮತ್ತೆ ಚಿಂತಿಸಲಿಲ್ಲ. ರಾತ್ರಿ ಮಲಗಲು ತನ್ನ ಕೋಣೆಗೆ ಬಂದಾಗ, ಅಲ್ಲಿದ್ದ ಕವರನ್ನು ಕಂಡ. ಅದರೊಳಗಿದ್ದ ಸೀರೆಯನ್ನು ನೋಡಿದಾಗ ತಾನು ಎರಡು ಸೀರೆಗಳನ್ನು ತಂದದ್ದು ನೆನಪಿಗೆ ಬಂತು.

ಒಂದು ಸೀರೆಯನ್ನು ಅತ್ತಿಗೆಗೆ ಕೊಡಬೇಕು ಎಂದುಕೊಂಡೇ ತಂದಿದ್ದ. ಅದು ಅವನು ಮೊದಲಿನಿಂದ ಮಾಡಿಕೊಂಡಿದ್ದ ನಿಯಮ. ಪ್ರತಿವರ್ಷ ಗೀತಳ ಹುಟ್ಟಿದ ಹಬ್ಬಕ್ಕೆ ಒಂದು ಸೀರೆ ಇವನ ಕಡೆಯಿಂದ ಉಡುಗೊರೆ. ತಾನು ಈ ದಿನ ಇದನ್ನು ಮರೆತದ್ದಕ್ಕೆ ಪರಿತಪಿಸಿದ. ಅದಕ್ಕೆ ಇವಳೇ ಕಾರಣ ಎಂದುಕೊಂಡು ಪೆಚ್ಚಾದ.

ಆ ನಂತರ ಒಂದೆರಡು ದಿನಗಳು ಕಳೆದರೂ ಅವನಿಗೆ ಸಿಟಿಗೆ ಹೋಗಲು ಆಗಿರಲಿಲ್ಲ. ನಾಳೆ ಹೊರಡಲೇಬೇಕು ಎಂದು ನಿಶ್ಚಯಿಸಿಕೊಂಡು ಮಲಗಿದ. ಬೆಳಿಗ್ಗೆ ಬೇಗ ಎದ್ದು ತೋಟದ ಹಣ್ಣು ತರಕಾರಿಗಳನ್ನು ಕೀಳಿಸಿಕೊಂಡು ಚೀಲಗಳಿಗೆ ತುಂಬಿಸಿಕೊಂಡು ಕಾರಿನ ಡಿಕ್ಕಿಯಲ್ಲಿ ಇರಿಸಿದ. ಹೇಗೂ ಇವತ್ತು ಅತ್ತಿಗೆ ಕೈಯ ಊಟ ಎಂದುಕೊಂಡು, ಬ್ರೆಡ್ ಕಾಫಿಯಲ್ಲೇ ತಿಂಡಿಯನ್ನು ಮುಗಿಸುವ ಆಲೋಚನೆಯಲ್ಲಿದ್ದ. ಹೊರಗೆ ಗೇಟನ್ನು ತೆರೆದ ಸದ್ದಾದಾಗಲು ಕಿಟಕಿಯಿಂದ ಹಣಿಕಿದ. ಗೇಟಿನ ಬಳಿ ಯಾರೋ ಹೆಂಗಸು ನಿಂತಿರುವಂತೆ ಕಂಡಿತು. ಕುತೂಹಲದಿಂದ ಹೊರಗೆ ಬಂದ. ಗೇಟಿನ ಬಳಿ ಸಂಧ್ಯಾ ಒಂದು ಕೈಚೀಲ ಹಿಡಿದು ನಿಂತಿದ್ದಳು. ಅವಳನ್ನು ಸಮೀಪಿಸಿದ "ಅರೇ – ನೀವಾ ? ಬನ್ನಿ ಬನ್ನಿ" ಎಂದ ಮುಗುಳ್ನಗುತ್ತಾ.

"ಸಾರಿ, ತಡವಾಯ್ತು. ನೀವು ಕೊಟ್ಟ ಸೀರೆಯನ್ನು ತಂದಿದೀನಿ..." ಎಂದಳು ಕವರನ್ನು ಅವನೆಡೆಗೆ ಹಿಡಿದು.

"ಸೀರೇನ ನೀವೇ ಇಟ್ಕೊಳ್ಳಿ. ಪರವಾಗಿಲ್ಲ" ಎಂದ.

"ಬೇಡ.... ಅದು ಸರಿಯಲ್ಲ... " ಎಂದಳು.

"ಸರಿ, ಏನಾದರೂ ಅಬ್ಜೆಕ್ಷನ್ ಇದ್ದರೆ ಬೇಡ.... ಒಳಗೆ ಬನ್ನಿ ಹೊರಗೇ ನಿಂತಿದ್ದೀರಲ್ಲ." ಸ್ವಾಗತಿಸಿದ.

"ಮತ್ತೊಂದಾದ್ರೂ ಬರ್ತೀನಿ. ಇವತ್ತು ಇಲ್ಲೇ ಇನ್ನೊಂದು ಕಡೆಗೆ ಹೋಗಬೇಕು. ಹೊತ್ತಾಗುತ್ತೆ."

"ಎಲ್ಲಿಗೆ ಅಂತ ಹೇಳಿದ್ರೆ ನಾನು ಡ್ರಾಪ್ ಕೊಡ್ತೀನಿ. ನಾನೂ ಹೊರಗೆ ಹೊರಟಿದೀನಿ."

"ಪರವಾಗಿಲ್ಲ. ನಿಮಗೆ ತೊಂದರೆಯಾಗುತ್ತೆ."

"ಒಂದೊಂದು ಸಲ ಬಲವಂತವಾಗಿ, ಇಷ್ಟವಿಲ್ಲದಿದ್ದರೂ ತೊಂದರೆಯ ಕೆಲಸಗಳನ್ನು ಮಾಡಬೇಕಾಗುತ್ತದೆ.... ನೀವು ಈಗ ಸೀರೆಯನ್ನು ವಾಪಸ್ಸು ಮಡುವ ನೆಪದಲ್ಲಿ ಇಲ್ಲೀವರೆಗೆ ಬರುವ ತೊಂದರೆ ತಗೊಂಡಿಲ್ಲವೆ ! ಹಾಗೆ..."

"ಅದು ಬೇರೆ ವಿಷಯ.... ಸೀರೆಯನ್ನು ವಾಪಸ್ಸು ಮಾಡಲೇಬೇಕಾಗಿತ್ತು."

"ಹಾಗೇ ಎಲ್ಲಾ ವಿಷಯದಲ್ಲೂ. ಒಂದಕ್ಕೊಂದು ಸಂಬಂಧವಿಲ್ಲದಿದ್ದರೂ ಸಂಬಂಧ ಹುಡುಕಿಕೊಂಡು ಬರುತ್ತೆ. ಈಗ ನನ್ನ ನಿಮ್ಮ ಪರಿಚಯ ಆಗಲೇ ಹಳೆಯದು. ನಾವಿಬ್ಬರೂ ಸ್ನೇಹಿತರು.... ಸ್ನೇಹಿತರ ನಡುವೆ ತೊಂದರೆಯ ಪ್ರಶ್ನೆ ಎಲ್ಲಿ? ಅಲ್ವಾ ?"

''ಎಲ್ಲಾ ಆಕಸ್ಮಿಕ.... ನನಗೆ ತಿಳಿಯದ ಹಾಗೆ ನಡೆದ ಘಟನೆ ಇದು.''

''ಆಕಸ್ಮಿಕವೇ ಒಬ್ಬರನ್ನೊಬ್ಬರಿಗೆ ಪರಿಚಯ ಮಾಡಿಸುತ್ತೆ. ನಿಮಗೆ ನನ್ನ ಸ್ನೇಹ ಬೇಡವಾದರೆ ಬಿಡಿ.... ನನ್ನದೇನೂ ಬಲವಂತವಿಲ್ಲ.''

''ಹಾಗಲ್ಲ, ವಿಷಯ ಅದಲ್ಲ....'' ಪದಗಳನ್ನು ತಡವರಿಸುತ್ತಾ ಹುಡುಕಿದಳು.

''ಹಾಗಲ್ಲದಿದ್ದರೆ.... ಹೇಗೆ! ನಿಮಗೆ ನನ್ನ ಮೇಲೆ ನಂಬಿಕೆ ಇದ್ದರೆ ಒಳಗೆ ಬನ್ನಿ. ಸ್ವಲ್ಪ ಹೊತ್ತಿನ ನಂತರ ಹೊರಡೋಣ'' ಮತ್ತೊಮ್ಮೆ ಕರೆದ.

ಅವನು ಅಷ್ಟು ಹೇಳಿದ ಮೇಲೆ ಅವಳು ಅವನ ಹಿಂದೆ ಹೊರಟಳು. ಒಳಗೆ ಅವಳು ಕುಳಿತ ಮೇಲೆ ಅವನು ಅಡಿಗೆ ಮನೆಯಿಂದ ಬಿಸಿ ಬಿಸಿ ಕಾಫಿಯನ್ನೂ ಬ್ರೆಡ್ ಸ್ಲೈಸ್‌ಗಳನ್ನು ತಂದಿತ್ತು ನುಡಿದ.

''ಬ್ರೆಡ್ ಸೇರಿದ್ರೆ ತಿನ್ನಿ. ಕಾಫಿ ಕುಡೀರಿ .... ಚೆನ್ನಾಗಿದೆ'' ನಸುನಕ್ಕ.

ಅವಳು ಕಾಫಿಯ ಬಟ್ಟಲನ್ನು ಕೈಗೆತ್ತಿಕೊಂಡಳು. ನಿಜಕ್ಕೂ ಕಾಫಿ ತುಂಬಾ ಚೆನ್ನಾಗಿತ್ತು. ತನ್ನ ಗಂಡ ಎಂದೂ ಹೀಗೆ ಕಾಫಿ ಮಾಡಿ ಕೊಟ್ಟಿರಲಿಲ್ಲವೆನ್ನುವುದು ನೆನಪಿಗೆ ಬಂತು. ನಿಧಾನವಾಗಿ ಕಾಫಿಯನ್ನು ಹೀರಿದಳು. ಉಲ್ಲಾಸ ಮೂಡಿತ್ತು.

ಅವನು ಕಾರಿನ ಕೀಯನ್ನು ಹಿಡಿದು ಹೊರಟ. ಹಿಂದೆ ನಡೆದು ಕಾರಿನ ಬಳಿಗೆ ಬಂದಳು. ಬಾಗಿಲಿಗೆ ಬೀಗ ಹಾಕಿ, ಅವನು ಕಾರಿನ ಬಾಗಿಲನ್ನು ತೆಗೆದ. ಅವಳು ಹತ್ತಿ ಕುಳಿತಳು. ಕಾರು ಗೇಟನ್ನು ದಾಟಿದ ಮೇಲೆ ಕೇಳಿದ.....

''ಈಗ ಎಲ್ಲಿಗೆ ?'' ಕಾರನ್ನು ಬೀದಿಗೆ ತಂದು ನಿಲ್ಲಿಸಿ ಕೇಳಿದ.

''ಇಲ್ಲಿ, ಇಲ್ಲಿಂದ ಸುಮಾರು ಒಂದು ಮೈಲಿ ಆಚೆಗೆ ಒಂದು ಆಶ್ರಮ ಇದೆ. ಅಲ್ಲಿಗೆ ಹೋಗಬೇಕಾಗಿತ್ತು'' ಸಂಕೋಚದಿಂದ ಹೇಳಿದಳು.

''ಆಶ್ರಮಾನಾ ? ಎಲ್ಲಿದೆ ? ಯಾವ ಆಶ್ರಮ ?''

''ಆಶ್ರಮ ಎಂದರೆ ಹೊರಗಿನಿಂದ ನೋಡಿದರೆ ಆಶ್ರಮದ ತರಹ ಕಾಣಿಸುಲ್ಲ. ದೊಡ್ಡ ಬಂಗಲೇನೇ ಅದು. ಅಲ್ಲಿ ಒಬ್ಬ ಸ್ವಾಮೀಜಿ ಇದಾರೆ.... ಅವರನ್ನು ಕಾಣಬೇಕಾಗಿತ್ತು. ಅದಕ್ಕೆ ಅಂತ್ಲೇ ಹೊರಟಿದ್ದೆ.

''ಅವರ ಹೆಸರು ? ಕುತೂಹಲದಿಂದ ಕೇಳಿದ.

''ಪುಣ್ಯಾನಂದಜೀ ಅಂತ'' ಕಣ್ಣುಗಳನ್ನು ಮುಚ್ಚಿ ಹೇಳಿದಳು.

''ನೀವು ಯಾವ ಕಾರಣದಿಂದ ಅಲ್ಲಿಗೆ ಹೋಗ್ತಿದೀರೋ ನನಗೆ ತಿಳಿಯದು. ಆದರೆ ನೀವು ಇಂತಹವರನ್ನೆಲ್ಲ ನಂಬ್ತೀರಾ-?

''ಸ್ವಲ್ಪ ಮಟ್ಟಿಗೆ ನಂಬಿಕೆ ಅಷ್ಟೆ. ಕೆಲಸವಾಗಬೇಕಾದರೆ ನಾವು ಕೆಲವು ವಿಷಯಗಳನ್ನು ನಂಬಲೇಬೇಕಾಗುತ್ತದೆ ಅಲ್ಲವೆ ? ಅವನ ಕಡೆ ನೋಡುತ್ತಾ ಪ್ರಶ್ನಿಸಿದಳು.

"ತುಂಬಾ ಚೆನ್ನಾಗಿ ಮಾತನಾಡ್ತೀರಿ. ಎಲ್ಲಾ ಬಿಟ್ಟು ವೈರಾಗ್ಯವನ್ನು ಬೋಧಿಸುವ ಆ ಸ್ವಾಮಿಯಿಂದ ನಿಮ್ಮ ಕೆಲಸವೇನಾಗಬೇಕು ಅಂತ ?" ನಕ್ಕು ಕೇಳಿದ.

ಪ್ಲೀಸ್ ನಗ್ಬೇಡಿ. ಅಲ್ಲಿಗೆ ಬೇಕಾದಷ್ಟು ಜನ ಭಕ್ತರು ಬರ್ತಾರೆ ಅಲ್ಲಿಗೆ. ಯಾರಿಗೆ ಏನಾದ್ರೂ ಸಮಸ್ಯೆ ಇದ್ದರೆ, ಪರಿಹಾರಕ್ಕೋಸ್ಕರ ಇಂಥೋರ ಬಳಿಗೆ ಹೋದ್ರೆ ತಪ್ಪೇನು ?

"ಸಾರಿ ಮೇಡಂ. ತಪ್ಪೇನಿಲ್ಲ. ಅಂತೂ ನೀವು ಏನೋ ಒಂದು ಸಮಸ್ಯೆಗೆ ಸಿಕ್ಕಿದೀರಿ ಅಂತ ತಿಳೀತು. ನನ್ನಿಂದ ಏನಾದರೂ ಸಹಾಯ ಬೇಕಾಗಿದ್ರೆ ಹೇಳಿ.... ಆಗೋದಾದ್ರೆ ಮಾಡ್ತೀನಿ.

"ಸಾರಿ ಅದು ನಿಮ್ಮಿಂದಾಗುವ ಕೆಲಸವಲ್ಲ." ತಟ್ಟನೆ ನುಡಿದಳು.

"ಸರಿ, ಅಂದರೇ ಆ ಸ್ವಾಮೀಜಿಯಿಂದಾಗುವ ಕೆಲಸ ಅಂತಾಯ್ತು. ಇರಲಿ, ನಿಮ್ಮ ಸಮಸ್ಯೆ ಬಗೆ ಹರಿದ ಮೇಲೆ ನನಗೆ ತಿಳಿಸಿ. ನನಗೆ ತಿಳಿದುಕೊಳ್ಳುವ ಆಸೆ ಕುತೂಹಲ. ನನಗೇನಾದರೂ ಸಮಸ್ಯೆ ಒದಗಿದರೆ ನಾನೂ ಆ ಸ್ವಾಮೀಜಿಯ ಬಳಿಗೆ ಹೋಗಬಹುದು... ಅಲ್ವಾ ?"

"ಆಗಲಿ, ಎಂದಾದ್ರೂ ಅವಕಾಶ ಇಸಕ್ಕಿದಾಗ ಹೇಳ್ತೀನಿ." ಕಿರುನಗೆಯನ್ನು ನಕ್ಕಳು.

ಆಶ್ರಮದ ಬಳಿಗೆ ಬಂದಾಗ ಅಲ್ಲಿ ಹೆಚ್ಚಿಗೆ ಯಾರೂ ಜನರಿದ್ದಂತೆ ಕಾಣಲಿಲ್ಲ. ಭವ್ಯವಾದ ಬಂಗಲೆಯ ಮುಂದೆ ಕಾರು ನಿಂತಾಗ ದಿನೇಶನಿಗೆ ಅನುಮನ ಹೆಚ್ಚಾಯಿತು.

"ನೋಡಿ, ಹೀಗೆ ಹೇಳ್ತೀನಿ ಅಂತ ಅಂದ್ಕೋಬೇಡಿ. ಇದು ನಿಮಗೆ ತಿಳಿದಿರುವ ಜಾಗವೇ ತಾನೆ ? ಅಥವಾ ವಿಳಾಸ ತಪ್ಪಾಗಿದೆಯಾ ಅಂತ ....?

"ಇಲ್ಲ, ಒಂದು ಪತ್ರಿಕೇಲಿ, ಇದರ ಬಗ್ಗೆ ಒಂದು ಲೇಖನವೇ ಬಂದಿತ್ತು. ಎಷ್ಟೋ ಜನರು ಬಂದು ಇಲ್ಲಿ ತಮ್ಮ ಸಮಸ್ಯೆಗೆ ಪರಿಹಾರ ಕಂಡುಹಿಡಿದುಕೊಂಡಿದಾರೆ ಅಂತ ಬರೆದಿತ್ತು. .... ವಿಳಾಸ ಸರಿಯಾಗಿಯೇ ಇದೆ."

"ದೇಹದ ಹಾಗೇ ಮನಸ್ಸಿನ ಖಾಯಿಲೆಗಳಿಗೆ ಬೇಕಾದಷ್ಟು ಕ್ಲಿನಿಕ್‌ಗಳಿವೆ. ಊರಾಚೆ ಇರುವ ಈ ಸ್ವಾಮೀಜಿ ಏನು ಮಾಡಬಲ್ಲರು ?"ಅನುಮಾನದಿಂದ ಕೇಳಿದ.

"ಏನೋ ನನಗೂ ತಿಳೀದು.... ಪೂಜೆ ಇತ್ಯಾದಿ ಮಾಡಿ ಫಲ ಕೊಡ್ತಾರಂತೆ. ಅದರಿಂದ ಒಳ್ಳೆಯದಾಗುತ್ತದಂತೆ. ಮಕ್ಕಳಿಲ್ಲದವರಿಗೆ ಮಕ್ಕಳಾಗುತ್ತಂತೆ."

ದಿನೇಶ ತಿರುಗಿ, ಅವಳನ್ನೇ ನೋಡಿದ. ಅವಳು ನಾಚಿಕೆಯಿಂದ ಮುಖ ತಗ್ಗಿಸಿದಳು. ಅವಳ ಮುಖ ಕೆಂಪಾಗಿತ್ತು.

"ಇರಲಿ, ನೀವು ಏನೋ ಒಂದು ನಂಬಿಕೆಯಿಂದ ಬಂದಿದೀರಿ. ಆದರೆ, ನನಗೆ ಮಾತ್ರ ನಂಬಿಕೆ ಇಲ್ಲ... ಆದ್ದರಿಂದ ನಾನೇಕೆ ಬೇಡವೆನ್ನಲಿ ? ಹೋಗಿ ಅದೇನು ಮಾತನಾಡಬೇಕಾಗಿದೆಯೋ ಆಡಿ ಬನ್ನಿ."

"ಪರವಾಗಿಲ್ಲ, ನೀವು ಹೋಗಿ. ನಾನು ಇಲ್ಲಿಂದ ಬಸ್ಸು ಹಿಡಿದು ನನ್ನ ಮನೆಗೆ ಹೋಗ್ತೀನಿ..... ಎಷ್ಟು ಹೊತ್ತಾಗುತ್ತೋ ಏನೋ ?"

"ನಾನು ಹೇಗೂ ಸಿಟಿಗೆ ಹೋಗ್ತೀನಿ. ನಿಮಗೂ ಡ್ರಾಪ್ ಕೊಡ್ತೀನಿ. ನಾನು ಯಾಕ್ತೀನಿ" ಇಳಿದು ಬಂಗಲೆಯ ಬಳಿ ಇದ್ದ ಕಾವಲುಗಾರನೊಡನೆ ಏನೋ ಹೇಳಿ ಒಳಗೆ ಹೋದಳು. ದಿನೇಶ ಕಾರಿನಿಂದ ಇಳಿದು ಸುತ್ತಲೂ ನೋಡುತ್ತಾ ನಿಂತ. ಹೊರಗಿನ ಪರಿಸರವೇನೋ ಹಿತವಾಗಿತ್ತು. ಬಂಗಲೆ ಒಳಗೆ ಹೇಗಿದೆಯೋ ? ಎಂದುಕೊಂಡ.

ಸ್ವಲ್ಪ ಹೊತ್ತಿನಲ್ಲೇ ಸಂಧ್ಯ ವಾಪಸ್ಸು ಬಂದಳು. ಅವಳ ಮುಖ ನೋಡಿ ಏನೂ ಅರಿಯಲಾರನಾದ. ಅವಳು ಏನೋ ಗೊಂದಲದಲ್ಲಿರುವಂತೆ ಅನ್ನಿಸಿತು. ಸಮಸ್ಯೆಗೆ ಪರಿಹಾರ ಕೇಳಹೋದವಳ ಸಮಸ್ಯೆ ಮತ್ತಷ್ಟು ಹೆಚ್ಚಾಗಿದೆ ಎಂದುಕೊಂಡ ತನ್ನಲ್ಲೇ.

ಆದರೂ ಕೇಳಿದ "ಹೆಚ್ಚಿಗೆ ಯಾರೂ ಜನವೇ ಕಂಡು ಬರುತ್ತಿಲ್ಲ... ಒಳಗೆ ಇದ್ದರೋ ಹೇಗೆ ? "

"ಒಳಗೂ ಹೆಚ್ಚಿಗೆ ಜನರು ಯಾರಿಲ್ಲ. ಒಂದಿಬ್ಬರು ಇದ್ದರು. ಅದರಲ್ಲಿ ಒಬ್ಬಳು ಇವತ್ತಿನಿಂದ ಮೂರುದಿನ ಇಲ್ಲೇ ಇರ್ತಾಳಂತೆ.... ಹಾಗಂತ ಹೇಳಿದ್ಲು.'

"ಯಾಕೆ ಅಲ್ಲೇ ಇದ್ದು ವಾಸಮಾಡಿಕೊಳ್ಳುವಂತಹ ಖಾಯಿಲೆಯೇ ?"

"ಏನೋ, ಹೋಗಲಿಬಿಡಿ..." ಎಂದು ಅವಳು ಉದಾಸೀನದಿಂದ ನುಡಿದಾಗ ಅವನು ಸುಮ್ಮನಾದ. ಒಳಗೆ ಏನು ಮಾತುಕತೆ ನಡೆದಿರಬಹುದು ಎಂದು ತಿಳಿದುಕೊಳ್ಳುವ ಕುತೂಹಲವುಂಟಾಗಲಿಲ್ಲ. ಸುಮ್ಮನೇ ಬೆಪ್ಪನಂತೆ ಅವಳನ್ನೇ ನೋಡಿದ.ಇಬ್ಬರೂ ಕಾರನ್ನೇರಿದರು. ಸೀದಾ ಕಾರನ್ನು ಜೆ.ಪಿ. ನಗರದ ತನಕ ಓಡಿಸಿದ. ಅವಳ ಮನೆಯ ತಿರುವಿನಲ್ಲಿ ನಿಲ್ಲಿಸಿದ. ಹೇಳಿದ.... ಮಾತಿನಲ್ಲಿ ಸ್ನೇಹವಿತ್ತು.

"ನಾನು ನಿಮ್ಮ ಸ್ನೇಹಿತನಾಗಿದೀನಿ. ನನ್ನನ್ನು ನಿಮ್ಮ ಮನೆಗೆ ಕರೆಯುವುದಿಲ್ಲವೆ ? ಅಥವಾ... ನಿಮ್ಮ ಯಜಮಾನರು ಏನಾದ್ರು ಅಂದಾರು ಅನ್ನುವ ಭಯವೋ ?"

"ಉತ್ತರವೂ ನಿಮಗೆ ತಿಳಿದಿದೆಯಲ್ಲ" ಎಂದಳು ನಗುತ್ತಾ.

"ಹೌದು, ಇನ್ನೂ ಎಷ್ಟೋ ಜನ ತುಂಬಾ ಮುಂದುವರೆದಿಲ್ಲ. ಆದರೆ ಗಂಡಂದಿರಿಗೆ ತಿಳಿಯದಂತೆ ಬೇಕಾದಷ್ಟು ಏನೇನೋ ಕೆಲಸಗಳನ್ನು ಮಾಡ್ತಾರೆ" ಎಂದ ತಾನೂ ನಕ್ಕು.

ಸಂಧ್ಯಾ ಬೆಚ್ಚಿದ್ದಳು "ಅಂದರೆ ?...." ಎಂದು ಕೇಳಿದಳು.

"ಹಾಗಾದ್ರೆ ನಿಜ ಹೇಳಿ.... ಊರಾಚೆ ಇರುವ ಆ ಆಶ್ರಮಕ್ಕೆ ನೀವು ಒಬ್ಬರೇ, ನಿಮ್ಮ ಯಜಮಾನರಿಗೆ ತಿಳಿಸಿ ಬಂದಿದ್ರಾ ?"

"ಅದು ನನ್ನಸ್ವಂತ ವಿಷಯ...." ಎಂದಳು ತಟ್ಟನೆ. ಅವನ ಮುಖ ಗಂಭೀರವಾಯಿತು.

''ಸಾರಿ, ಕ್ಷಮಿಸಿ'' ಎಂದು ಹೇಳಿ, ''ನಾನು ಒಬ್ಬ ಒಳ್ಳೆಯ ಸ್ನೇಹಿತ ಅಂತ ಭಾವಿಸಿದ್ದರೆ ನನ್ನಿಂದ ಏನಾದರೂ ಸಹಾಯ ಬೇಕಿದ್ದರೆ ಹೇಳಿ, ಮಾಡ್ತೀನಿ. ಆದರೆ ಪ್ಲೀಸ್...... ದುಡುಕಬೇಡಿ. ನಿಧಾನವಾಗಿ ಯೋಚಿಸಿ ಮುಂದುವರೆಯಿರಿ. ಕಾಲ ಕೆಟ್ಟದ್ದು ಎಂದು ಹೇಳಿ ಕಾರಿನ ಬಾಗಿಲನ್ನು ತೆರೆದ. ಸಂಧ್ಯಾ ಇಳಿದಳು. ಅವಳನ್ನೇ ದೀರ್ಘವಾಗಿ ನೋಡಿದ. ಅವಳ ಮುಖದ ಬಣ್ಣ ಕೆಟ್ಟು ಹೋಗಿತ್ತು. ಆದರೂ ಮೆಲ್ಲಗೆ ''ಥ್ಯಾಂಕ್ಸ್'' ಎಂದು ಹೇಳಿ, ಅತ್ತಿತ್ತ ನೋಡಿ, ರಸ್ತೆಯನ್ನು ದಾಟಿ ಹೊರಟೇ ಹೋದಳು. ಒಂದು ಗಳಿಗೆ ಅವಳ ನಡಿಗೆಯನ್ನೇ ಗಮನಿಸುತ್ತಿದ್ದವನು ಕಾರನ್ನು ಹಿಂದಕ್ಕೆ ತಿರುಗಿಸಿದ.

ಮನೆಯ ಒಳಗೆ ಬಂದವಳೇ ಮೊದಲು ಒಂದು ಲೋಟ ತಣ್ಣೀರನ್ನು ಗಟಗಟನೆ ಕುಡಿದು, ಸೋಫಾದ ಮೇಲೆ ಕುಳಿತು ಕಣ್ಣುಗಳನ್ನು ಮುಚ್ಚಿ ನಡೆದ ವಿಷಯಗಳ ಬಗ್ಗೆ ಯೋಚಿಸತೊಡಗಿದಳು.

ಸ್ವಾಮೀಜಿ ಇಂದು ದರ್ಶನ ಕೊಟ್ಟಿರಲಿಲ್ಲ. ಅವರ ಶಿಷ್ಯರು ಯಾರೋ ಒಬ್ಬರು ಬಂದು, ಅವಳ ಕೈಗೆ ಕೆಲವು ಕಾಗದದದ ಪೊಟ್ಟಣಗಳನ್ನು ಕೊಟ್ಟು ಹೇಳಿದ್ದರು. ದಿನಕ್ಕೆ ಮೂರು ಬಾರಿ ತಿನ್ನಿರಿ. ಕುಂಕುಮವನ್ನು ಹಣೆಗೆ ಇಟ್ಟುಕೊಳ್ಳಿರಿ. ರಾತ್ರಿ ಮಲಗುವಾಗ ಮರೆಯದೇ ಒಂದು ಲೋಟ ಹಾಲಿಗೆ ಈ ಪುಡಿಯನ್ನು ಸೇರಿಸಿ ಕುಡಿಯಿರಿ''ಎಂದು ವಿವರಿಸಿ ಹೇಳಿದ್ದರು.

ಅವಳು ನಡಗುವ ಕೈಗಳಿಂದ ಅದನ್ನು ತೆಗೆದುಕೊಂಡಳು.

''ಮೂರು ದಿನ ಕಳೆದ ನಂತರ ಇಲ್ಲಿಗೆ ಬನ್ನಿ.... ಆಮೇಲೆ ಮೂರು ದಿನ ನೀವು ಇಲ್ಲಿಯೇ ಇರಬೇಕಾಗುತ್ತದೆ. ಮೂರು ದಿನ ಅಖಂಡ ಪೂಜೆ ಇರುತ್ತೆ''

''ಮೂರು ದಿನ ಇಲ್ಲಿ ಇರ್ಲೇಬೇಕಾ ?'' ಹೆದರಿಕೆಯಿಂದ ಕೇಳಿದ್ದಳು

''ಸಾಧ್ಯವಿಲ್ಲದಿದ್ದರೆ, ನಿಮ್ಮ ಮನೆಗೇ ನಮ್ಮ ಸ್ವಾಮೀಜಿಯವರು ಬರುತ್ತಾರೆ. ಎಲ್ಲಾ ವ್ಯವಸ್ಥೆಗಳನ್ನು ನೀವು ಮಾಡಿಕೊಡಬೇಕಾಗುತ್ತದೆ. ಅವರಿಗೇ ಪ್ರತ್ಯೇಕವಾದ ಕೋಣೆ, ಪೂಜೆಗೆ ಬೇಕಾದ ವಸ್ತುಗಳು ಇತ್ಯಾದಿಗಳನ್ನು ಸಿದ್ಧಗೊಳಿಸಬೇಕಾಗುತ್ತದೆ.

''ಅದು ಸಾಧ್ಯವೇ ಇಲ್ಲ''ಎಂದು ಹೇಳಬೇಕೆಂದುಕೊಂಡವಳು ಸುಮ್ಮನಾದಳು. ಎರಡೂ ಅಸಾಧ್ಯವೇ ? ಗಂಡನಿಗೆ ತಿಳಿಯದಂತೆ ಮೂರುದಿನಗಳು ಅಪರಿಚಿತ ಸ್ಥಳದಲ್ಲಿ ಇರುವ ಧೈರ್ಯವಿಲ್ಲ. ಅಥವಾ ಗಂಡನಿಗೆ ತಿಳಿಯದಂತೆ ಮೂರುದಿನ ಸ್ವಾಮೀಜಿಗೆ ತನ್ನ ಮನೆಯಲ್ಲಿ ಇರಲು ಅನುಕೂಲಗಳನ್ನು ಒದಗಿಸಿಕೊಡಲು ಸಾಧ್ಯವಿಲ್ಲ... ಎಂತಹ ಪರಿಸ್ಥಿತಿ ಒದಗಿತಲ್ಲ ಎಂದುಕೊಂಡು, ಸುಮ್ಮನೆ ಕೈಮುಗಿದು ಆಚೆ ಬಂದಿದ್ದಳು.

ನಡೆದ ಮಾತುಕತೆಗಳನ್ನು ದಿನೇಶನಿಗೆ ತಿಳಿಸಲು ಮನಸ್ಸಾಗಲಿಲ್ಲ. ಅವನ್ಯಾರೋ ಏನೋ, ಇನ್ನು ಎರಡು ಮೂರು ದಿನಗಳ ಕೆಳಗೆ ಪರಿಚಯವಾದವನು ನನ್ನ ಬಗ್ಗೆ ಯಾವ ಭಾವನೆ ಇರುತ್ತದೋ, ನೋಡಿದರೇನೋ ಒಳ್ಳೆಯವನಂತೆ ಕಾಣುತ್ತಾನೆ. ಆದರೆ ? ನನ್ನ

ಸ್ವಂತ ವಿಷಯಗಳನ್ನು ಅವನಿಗೆ ತಿಳಿಸಲು ಸಾಧ್ಯವೇ ? ಹೋಗಲಿ ಅಂದರೆ, ನನ್ನ ಗಂಡನಿಗೂ ಇದನ್ನೆಲ್ಲ ತಿಳಿಸುವುದು ಸಾಧ್ಯವೇ ಇಲ್ಲ ... ಯಾವುದನ್ನೂ ಒಪ್ಪದ ಆಸಾಮಿ ಅವರು. ಸ್ವಾಮೀಜಿಯ ಬಗ್ಗೆ ನಂಬಿಕೆ ಇದೆಯೋ ಇಲ್ಲವೋ, ಹಣ ಖರ್ಚು ಮಾಡಿ, ಈ ಪೂಜೆ ಗೀಜೆಗೆ ಒಪ್ಪುವಂತವನಂತೂ ಖಂಡಿತಾ ಅಲ್ಲ. ನಾನು ಮೂರು ದಿನ ಅಲ್ಲಿ ಇರುವ ವಿಷಯ ತಿಳಿಸಿದರೆ, ದೊಡ್ಡ ಪಗರಣವೇ ಸರಿ. ಯಾವುದಾದರೂ ಸುಲಭದ ವಿಧಾನ ಹೇಳುವುದನ್ನು ಬಿಟ್ಟು ಇದೆಂತಹ ಪರಿಹಾರ ? ನಾನೀಗ ಏನು ಮಾಡಲಿ ? ಒಂದೂ ಸರಿ ಹೋಗಲಿಲ್ಲ. ತನ್ನಲ್ಲೇ ಪೇಚಾಡಿಕೊಂಡಳು. ಈಗ ಯಾವುದೂ ಬೇಡ ಅಂತ ಸುಮ್ಮನಾದರೆ, ನನಗೆ ಫಲವಿಲ್ಲ, ನನಗೇ ನಷ್ಟ ಮುಂದುವರೆದರೆ ಆ ಸ್ವಾಮೀಜಿ ಹೇಳಿದ್ದನ್ನೆಲ್ಲ ಕೇಳಲೇ ಬೇಕಾಗುತ್ತದೆ. ಇದನ್ನು ಬಿಟ್ಟು ಬೇರೆ ಉಪಾಯವೇ ಇಲ್ಲವೆ ! ಇದರ ಬಗ್ಗೆ ಯಾರ ಹತ್ತಿರ ಹೇಳಲಿ ! ಯಾರನ್ನು ಕೇಳಲಿ ! ಆ ಪೊಟ್ಟಣಗಳನ್ನು ಮುಚ್ಚಿಟ್ಟು ಹಾಸಿಗೆಯ ಮೇಲೆ ಮಲಗಿದಳು. ಏನೂ ತಿಳಿಯದೇ ನಿದ್ದೆ ಬರುವವರೆಗೂ ಹೊರಳಾಡಿದಳು.

ಬೆಳಿಗ್ಗೆ ಎದ್ದವಳು, ಗಂಡನಿಗೆ ತಿಳಿಯಬಾರದೆಂದು, ಆ ಪೊಟ್ಟಣಗಳನ್ನು ತೆಗೆದು ಬೇರೆಕಡೆ ಮುಚ್ಚಿಟ್ಟಳು. ಈ ದಿನ ಗಂಡ ವಾಪಸ್ಸು ಬರುತ್ತಾನೋ ಇಲ್ಲವೋ ಎಂದುಕೊಂಡು, ದಿನ ನಿತ್ಯದ ಕೆಲಸಕ್ಕೆ ತೊಡಗಿದಳು. ಆದರೆ ಏನೋ ಯೋಚನೆಗಳಿಂದ ಕೆಲಸವನ್ನು ಸಹ ಮಾಡಲಾಗಲಿಲ್ಲ. ಅಲ್ಲಿಂದಿಲ್ಲಿಗೆ ಹುಚ್ಚಿಯಂತೆ ಪರದಾಡಿದಳು. ಯಾರಿಗೂ ತಿಳಿಯದಂತೆ ಸುಲಭವಾಗಿ ತನ್ನ ಕೆಲಸ ಸಾಧಿಸಿಕೊಳ್ಳುವುದು ಹೇಗೆ ? ಎಂದು ಮತ್ತೆ ಮತ್ತೆ ಚಿಂತಿಸಿದಳು. ಕಡೆಗೆ ಒಂದು ಉಪಾಯ ಹೊಳೆಯಿತು. ಒಂದು ಕಡೆ ಕೂತು ಅದರ ಬಗ್ಗೆ ಚಿಂತಿಸಿದಳು.

ಅವನು ಹೊಸದಾಗಿ ಪರಿಚಯವಾದವನೇ. ಆದರೂ ನೋಡಿದರೆ ಕೆಟ್ಟವನಂತೆ ಅನ್ನಿಸುವುದಿಲ್ಲ. ವಿದ್ಯಾವಂತನಂತೆ, ಸುಸಂಸ್ಕೃತನಂತೆ ಕಾಣುತ್ತಾನೆ... ಇಲ್ಲದಿದ್ದರೆ, ಮೊದಲ ದಿನ ಅಸಹಾಯಕ ಪರಿಸ್ಥಿತಿಯಲ್ಲಿ ನಿಂತಿದ್ದ ತನಗೆ ಸಹಾಯ ಮಾಡುವ ನೆಪದಲ್ಲಿ ಏನು ಬೇಕಾದರೂ ಮಾಡಬಹುದಾಗಿತ್ತು. ಅಶ್ಲೀಲವಾಗಿ ಒಂದು ನೋಟವನ್ನೂ ಸಹ ಬೀರಲಿಲ್ಲ. ನಿಜಕ್ಕೂ ಒಳ್ಳೆಯವನೇ. ನನ್ನನ್ನು ಸ್ನೇಹಿತೆಯಂತೆ ಆದರಿಸಿದ್ದಾನೆ. ನಿಜವಾದ ಸ್ನೇಹಿತ ಅವನೇ. ಅವನನ್ನೇ ಏಕೆ ಸಲಹೆ ಕೇಳಬಾರದು ? ಹೇಗೂ ಅವನಿಗೆ ಕೆಲವು ವಿಷಯಗಳು ತಿಳಿದಿವೆ. ಆದರೆ ಅವನು ಗಂಡಸು.... ಅವನೊಡನೆ ಎಲ್ಲಾ ಹೇಗೆ ಹೇಳಲಿ ? ಅವನ ಮನೆಯಲ್ಲಿ ಇನ್ನೂ ಯಾರೂ ಇದ್ದಂತೆ ಕಾಣುವುದಿಲ್ಲ. ಆದರೆ ಯಾರನ್ನಾದರೂ ಸಲಹೆ ಕೇಳಿ ಒಂದು ಇತ್ಯರ್ಥಕ್ಕೆ ಬರಲೇಬೇಕು. ಇಲ್ಲದಿದ್ದರೆ ನನ್ನ ತಲೆ ಕೆಟ್ಟು ಹೋಗುತ್ತದೆ. ಅವನನ್ನು ಕೇಳುವುದೇ ಸರಿ.. ಅವನು ಇನ್ನ್ಯಾರಿಗೂ ಹೇಳಲಾರ. ವಿಷಯ ಗುಟ್ಟಾಗಿಯೇ ಇರುತ್ತದೆ. ಹೇಗೂ ಅವನಿಗೆ ನನ್ನ ಗಂಡನ ಅಥವಾ ನನ್ನ ಸಂಬಂಧಿಕರ ಪರಿಚಯವಿಲ್ಲ. ಅವನೇ ಸರಿ ಎಂದು ತೀರ್ಮಾನಕ್ಕೆ ಬಂದು ನೆಮ್ಮದಿಯ ನಿಟ್ಟುಸಿರನ್ನು ಬಿಟ್ಟಳು.

ಆದರೆ ? ಅವನ ಮನೆಗೆ ಹೋಗುವುದೆಂತು ? ಈಗ ಯಾವ ಕಾರಣವೂ ಇಲ್ಲ. ಅವನೇ ದಾರಿಯಲ್ಲಿ ಎಲ್ಲಾದರೂ ಆಕಸ್ಮಿಕವಾಗಿ ಸಿಕ್ಕಿದರೆ ? ಹೇಗೆ ಸಾಧ್ಯ ? ಅವನಿರುವುದು

ಸಿಟಿಯಿಂದ ಇಪ್ಪತ್ತೈದು ಮೂವತ್ತು ಮೈಲಿಯ ಆಚೆ. ಈ ಜೆ.ಪಿ.ನಗರವೊ ಇನ್ನೊಂದು ತುದಿ. ಹೋಗಲಿ ಅಂತ ಸುಮ್ಮನಿರಲೂ ಮನಸ್ಸು ಒಪ್ಪುತ್ತಿಲ್ಲವಲ್ಲ ಎಂದು ಪರಿತಪಿಸಿದಳು....

* * * *

ಆ ರಾತ್ರಿ ಅನಿರೀಕ್ಷಿತವೋ ಎಂಬಂತೆ ಗಂಡ ಊರಿಗೆ ಬಂದ. ''ನಮ್ಮ ಆಫೀಸಿನವರು ಒಬ್ಬರು ತೀರಿಕೊಂಡರು. ಟೂರ್ ಕ್ಯಾನ್ಸಲ್ ಮಾಡಿ ಬಂದುಬಿಟ್ಟೆ'' ಎಂದಿದ್ದ. ಆ ರಾತ್ರಿ, ಅವಳು ಏನೋ ತವಕದಲ್ಲಿದ್ದಂತೆ, ಅವನೂ ಸಹ ಏನನ್ನೋ ಕೇಳಲು ಹೊರಟಿರುವಂತೆ ತೋರಿತು. ಅನುಮಾನಿಸಿ ಕಡೆಗೂ ಹೇಳಿದ.

''ಸಂಧ್ಯಾ , ನನ್ನ ಸ್ನೇಹಿತ ತೀರಿಹೋದನಲ್ಲ. ಅವನಿಗೆ ಮೂರು ಜನ ಮಕ್ಕಳು.... ಪಾಪ, ಆಕೆಗೆ ಆ ಮಕ್ಕಳನ್ನು ಸಾಕುವುದು ಕಷ್ಟವಾಗಬಹುದು. ನಾನು ಒಂದು ಮಗುವನ್ನು ದತ್ತು ತಗೋಳ್ಳೋಣ ಅಂತ ಅಂದ್ಕೊಂಡೆ..... ನೀನು ಏನು ಹೇಳ್ತೀಯ....? ಆಕೆಗೆ ಸಹಾಯವಾಗುತ್ತದೆ.

ಮಲಗಿದ್ದವಳು ದಡಕ್ಕನೆ ಎದ್ದು ಕುಳಿತಳು.

''ಏನ್ರೀ ? ಏನು ಹೇಳ್ತಿದ್ದೀರಾ ? ನಮಗೆ ಮಕ್ಕಳಾಗುಲ್ಲ ಅನ್ನುವ ತೀರ್ಮಾನಕ್ಕೆ ಬಂದು ಬಿಟ್ರಾ ! ನನಗಿನ್ನೂ ಇಪ್ಪತ್ತಾರೇ ವರ್ಷ.... ನಾವಿನ್ನು ಮುದುಕರಾಗಿಲ್ಲ...'' ಕಣ್ಣುಗಳನ್ನರಳಿಸಿ ಕೇಳಿದಳು.

''ಹಾಗಲ್ಲ, ಪಾಪ. ಅವರ ಸ್ಥಿತಿಗೆ ಅಯ್ಯೋ ಅಂತ ಅನ್ನಿಸ್ತು ಅಷ್ಟೇ''

''ಅಂತಹ ಸ್ಥಿತಿಯವರು ಎಷ್ಟೋ ಜನ ಇರ್ತಾರೆ. ಎಲ್ಲರ ಮಕ್ಕಳನ್ನು ದತ್ತು ತಗೋಳ್ಳುಕ್ಕೆ ಆಗುಲ್ಲವಲ್ಲ. ನಾನು ಇದಕ್ಕೆ ಒಪ್ಪುಲ್ಲ.''

''ಆ ಮಗೂನ ಈಗಿನಿಂದ ಬೆಳೆಸಿದರೆ ನಮ್ಮದೇ ಆಗುತ್ತೆ. ಯಾವ ತೊಂದರೇನೂ ಇರುಲ್ಲ. ಆಮೇಲೆ ಎಲ್ಲಾ ಸರಿ ಹೋಗುತ್ತೆ.''

''ನೀವು ಏನೇ ಹೇಳಿದ್ರೂ ನಾನು ಇದಕ್ಕೆ ಖಂಡಿತಾ ಒಪ್ಪುವುದಿಲ್ಲ. ನನ್ನ ವ್ರತಕತೆ ಯಾವುದೂ ಸುಳ್ಳಾಗುವುದಿಲ್ಲ. ನನಗೆ ಮಗುವಾಗಿಯೇ ಆಗುತ್ತೆ. ನಾನು ಹೊತ್ತು ಹೆತ್ತು ಬೆಳೆಸಿದ ಮಗು ಮಾತ್ರ ನನ್ನದು. ಇನ್ನ್ಯಾರ ಮಗೂವೂ ನನ್ನದಾಗಲು ಸಾಧ್ಯವಿಲ್ಲ.'' ಉದ್ವೇಗದಿಂದ ಅರಚಿದಳು.

''ಇದರಲ್ಲಿ ತೊಂದರೆ ಏನು ? ಹೀಗೇಕೆ ಆವೇಶದಿಂದ ಕಿರುಚ್ತೀಯ ?''

''ತೊಂದರೆ ಇದೆ. ಬೇಕಾದಷ್ಟಿದೆ. ನನಗಿಷ್ಟವಿಲ್ಲವೆಂದು ತಿಳಿದೂ ಮತ್ತೆ ಮತ್ತೆ ಅದೇ ಮಾತನ್ನಾಡುತ್ತೀರಲ್ಲ ಏಕೆ! ನಿಮಗೆ ನನ್ನ ಮೇಲಿನ ಪ್ರೀತಿ ಕಡಿಮೆಯಾಯ್ತೆ? ಅಥವಾ ಆ ಸ್ನೇಹಿತನ ಹೆಂಡತಿಗೆ ಸಹಾಯ ಮಾಡುವ ಆಸೇನೋ ? ''

"ಸಂಧ್ಯಾ ! ಏನೇನೋ ಮಾತನ್ನಾಡಬೇಡ. ನಿನ್ನ ಮೇಲಿನ ಪ್ರೀತಿ ಅತಿ ಹೆಚ್ಚಾಗಿರುವುದರಿಂದಲೇ, ನೀನು ಸಾಕುವುದಕ್ಕೆ ಅಂತ ಮಗೂನ ದತ್ತು ತಗೋಳ್ಳೋಣ ಅಂತ ಅಂದಿದ್ದು. ಇದು ಕೇವಲ ನಿನಗೋಸ್ಕರ."

"ಸಾಕು. ಇದೆಂತಹ ಪ್ರೀತಿ ? ನನಗಿಷ್ಟವಿಲ್ಲದ ಕೆಲಸವನ್ನು ಬಲವಂತವಾಗಿ ನನ್ನಿಂದ ಮಾಡಿಸುವ ಆಸೇನಾ ? ... ನಿಮಗ್ಯಾಕೆ ಇಂಥಾ ದುರ್ಬುದ್ಧಿ? "

"ಬಲವಂತ ಮಾಡ್ತಿಲ್ಲ ಸಂಧ್ಯಾ. ನಮ್ಮ ಮದುವೆಯಾಗಿ ಹತ್ತು ವರ್ಷಗಳಾಗುತ್ತಾ ಬಂತು. ನಿನಗೂ ಮೂವತ್ತು ವಯಸ್ಸಾಗುತ್ತಾ ಬಂತು. ನಾನೋ ಸದಾ ಹೊರಗೆ ಟೂರ್ ಹೋಗುತ್ತಿರುವವನು. ನಮಗೇ ಮಕ್ಕಳಾಗುವ ಸಾಧ್ಯತೆ ಇದ್ದಿದ್ದರೆ ಇಷ್ಟು ಹೊತ್ತಿಗೆ ಖಂಡಿತಾ ಆಗಿರುತ್ತಿತ್ತು. ನಾವು ಯಾವುದನ್ನೂ ಬಿಟ್ಟೆವು ? ಡಾಕ್ಟರು ಸಹ ಏನೂ ದೋಷವಿಲ್ಲ ಎಂದರಲ್ಲ. ಆದರೆ ಆಯೋಗ ಮಾತ್ರ ಇನ್ನೂ ಬಂದಿಲ್ಲ. ನಾವು ಇನ್ನೂ ಕಾಯುವುದು ಸರಿಯಲ್ಲ, ನಾವು ಮುದುಕರಾದಮೇಲೆ ಚಿಕ್ಕ ಮಗುವನ್ನು ಸಾಕುವುದು ಕಷ್ಟವಾಗುತ್ತೆ. ಅದಕ್ಕೇ ಹೇಳ್ತೀದೀನಿ. "

ಸಂಧ್ಯಾ ಬಿಕ್ಕಿ ಬಿಕ್ಕಿ ಅಳುವ ಸದ್ದು ಕೇಳಿ ಅವನು ಮಾತನ್ನು ಅಷ್ಟಕ್ಕೇ ನಿಲ್ಲಿಸಿ, ಅವಳ ಹೆಗಲ ಮೇಲೆ ಕೈಯನ್ನಿಟ್ಟ. ಅವಳು ದೂರ ಸರಿದಳು.

"ಸಾರಿ, ಸಂಧ್ಯಾ ನಿನಗೋಸ್ಕರ ನನಗೆ ತಿಳಿದುದ್ದನ್ನು ಹೇಳಿದೆ ಅಷ್ಟೇ. ಒಬ್ಬಳೇ ಇರ್ತೀಯ ನಿನಗೆ ಎಷ್ಟು ಬೇಜಾರಾಗುತ್ತೆ ಅಂತ ನಾನು ಊಹಿಸಬಲ್ಲೆ...."

"ಹಾಗಾದ್ರೆ ಇನ್ನು ಮೇಲೆ ನನ್ನ ಹತ್ತಿರ ಈ ವಿಷಯ ಕುರಿತು ಮಾತ್ರ ಮಾತನ್ನಾಡಬೇಡಿ. ನಾನು ಇನ್ನೂ ಆ ನಂಬಿಕೇನ ಕಳೆದುಕೊಂಡಿಲ್ಲ. ನನಗೆ ನನ್ನದೇ ಆದ ಸ್ವಂತ ಮಗು ಆಗಿಯೇ ಆಗುತ್ತೆ. ನಾನೇ ನೋವನ್ನನುಭವಿಸಿ, ಹೆತ್ತ ಮಗುವನ್ನು ಮಾತ್ರ ಸಾಕುವ ಆಸೆಯನ್ನು ಇಟ್ಟುಕೊಂಡಿದೀನಿ. ಆ ಆಸೆಯನ್ನು ತಳ್ಳಿ ಹಾಕುವ ಮಾತುಗಳನ್ನು ಮಾತ್ರ ಹೇಳಬೇಡಿ. ಪ್ಲೀಸ್."

"ಸರಿ, ನಿನ್ನಿಷ್ಟ. ನಾನು ಹೇಗೂ ಹೊರಗೆ ತಿರುಗುವವನು. ನನಗೆ ಯಾವ ಬೇಜಾರಿಲ್ಲ" ಎಂದವನೇ ಮುಸುಕು ಬೀರಿ ಮಲಗಿದ.

ಅವನ ಮಾತುಗಳಿಂದ ನೊಂದ ಹೃದಯ ಎಷ್ಟೋ ಹೊತ್ತಿನವರೆಗೂ ರೋಧಿಸುತ್ತಿತ್ತು. ಹಾಗಾದರೆ, ಇವನು ತಮಗೆ ಇನ್ನು ಮಕ್ಕಳಾಗುವ ಸಾಧ್ಯತೆಯೇ ಇಲ್ಲ ಎಂದು ಭಾವಿಸಿದ್ದಾನೆಯ ! ಹೇಗಾದರೂ ಸರಿ, ಏನಾದರೂ ಸರಿ, ನಾನು ಸೋಲಬಾರದು. ಗಂಡನ ಮಾತಿಗೆ ಒಪ್ಪಬಾರದು. ನಾನು ತಾಯಿಯಾಗಿ ನನ್ನ ಪ್ರತಿಷ್ಟೆಯನ್ನು ಉಳಿಸಿಕೊಳ್ಳಬೇಕು ಎಂಬ ಹಠ ಉದ್ಭವಿಸಿತು. ಅದಕ್ಕಾಗಿ ಮನವನ್ನು ಸಿದ್ಧಗೊಳಿಸಿದಳು.

* * * *

ಆದರೆ ಮುಂದೆ ಎಷ್ಟೋ ದಿನಗಳವರೆಗೆ ಅವಳಿಗೆ ಕಾರಣಾಂತರಗಳಿಂದ ಆ ಆಶ್ರಮಕ್ಕೆ ಹೋಗಲಾಗಲಿಲ್ಲ. ಸ್ವಾಮೀಜಿಯ ಶಿಷ್ಯ ಕೊಟ್ಟ ಭಸ್ಮ ಪೊಟ್ಟಣಗಳಲ್ಲೇ ಉಳಿದಿತ್ತು. ಗಂಡ ಮತ್ತೆಟೂರ್‌ಗೆ ಹೊರಡುವ ದಿನಗಳನ್ನೇ ನಿರೀಕ್ಷಿಸತೊಡಗಿದಳು. ಟೂರ್‌ಗೆ ಹೊರಡಲೆಂದು ಸಿದ್ಧತೆಗಳನ್ನು ಮಾಡಿಕೊಂಡಿದ್ದ ಬೆಳಿಗ್ಗೆ ಬೇಗನೆ ಎದ್ದು ಹೊರಡುವ ಮೊದಲು ಅವನು ನುಡಿದ.

"ನಾನು ಈ ಸಾರಿ ವಾಪಸ್ಸು ಬರುವುದಕ್ಕೆ ಎಂಟು ಹತ್ತು ದಿನಗಳಾದರೂ ಆಗುತ್ತೆ. ನೀನು ಬೇಕಾದರೆ ನಿನ್ನ ತಾಯಿಯ ಮನೆಗೆ ಹೋಗಿರು" ಎಂದು ಹೇಳಿದಾಗ ಅವಳ ಆಲೋಚನೆಯೇ ಬೇರೆ ಇತ್ತು. ಸುಮ್ಮನೆ 'ಹೂಂ' ಎಂದಷ್ಟೇ ಅಂದಳು. ಅವನು ಸಿದ್ಧನಾಗಿ ಹೊರಟುಬಿಟ್ಟ.

ಸ್ವಲ್ಪ ಹೊತ್ತಿನಲ್ಲೇ ತಾನೂ ಸಿದ್ಧಳಾಗಿ ಆ ಆಶ್ರಮದ ಕಡೆಗೆ ಹೊರಟಳು. ಆಶ್ರಮವನ್ನು ತಲುಪಿದಾಗ ಆಶ್ರಮ ಬಿಕೋ ಎನ್ನುತ್ತಿತ್ತು. ಜನರ ಸುಳಿವೇ ಇದ್ದಂತಿರಲಿಲ್ಲ. ಅನುಮಾನದಿಂದಲೇ ಬಂಗಲೆಯ ಬಳಿಗೆ ಬಂದಳು. ಬಾಗಿಲಿಗೆ ಬೀಗ ಹಾಕಿತ್ತು. ಅಲ್ಲಿ ಕೂತಿದ್ದ ವಾಚಮನ್ ಕಡೆ ನೋಡಿದಳು.

"ಸ್ವಾಮೀಜಿ ಊರಿನಲ್ಲಿಲ್ಲ. ಸದ್ಯಕ್ಕೆ ಯಾರಿಗೂ ಸ್ವಾಮೀಜಿಯ ದರ್ಶನವಿಲ್ಲ. ಎಂಟು ಹತ್ತು ದಿನ ಬಿಟ್ಟು ಬನ್ನಿ" ಎಂದ.

ಅವಳಿಗೆ ನಿರಾಶೆಯಾಯಿತು. ಒಂಟಿಯಾಗಿ ಅವನೆದುರಿಗೆ ನಿಂತು ಮಿಕಿ ಮಿಕಿ ನೋಡಲು ಇಷ್ಟವಿಲ್ಲದೇ ಹಿಂತಿರುಗಿದಳು. ಗಂಡ ಹೇಳುವ ಹಾಗೇ ನಮಗೆ ಮಕ್ಕಳಾಗುವ ಪುಣ್ಯವಿಲ್ಲವೇನೋ..... ಇಲ್ಲದಿದ್ದರೆ ಹೀಗೇಕೆ ಆಗುತ್ತಿತ್ತು? ಎಂದುಕೊಂಡು ಗೇಟಿನಾಚೆಗೆ ಬಂದು ನಿಂತಳು.

ಒಂದು ಗಳಿಗೆ ಹಾಗೇ ನಿಂತು ಏನೋ ಯೋಚಿಸಿದಂತೆ ಮಾಡಿ ದಿನೇಶನ ಎಸ್ಟೇಟಿನ ಕಡೆಗೆ ಹೆಜ್ಜೆ ಹಾಕಿದಳು.

* * * *

ಮಧ್ಯಾಹ್ನ ಹನ್ನೆರಡು ಗಂಟೆಯ ಸಮಯವಾಗಿತ್ತು. ದಿನೇಶ ಮನೆಯಲ್ಲೇ ಇದ್ದ. ಗೇಟಿನ ಸದ್ದಿಗೆ ಇಣುಕಿ ನೋಡಿದವನು, ಅವಳನ್ನು ಕಂಡು ಮುಗುಳ್ನಗುತ್ತಾ ಆಚೆಗೆ ಬಂದ. ದಿಢೀರನೆ ಅವನನ್ನು ಕಂಡು ಒಂದು ಗಳಿಗೆ ಹಾಗೇ ನಿಂತಳು.

"ಬನ್ನಿ, ಬನ್ನಿ, " ಎಂದ ಸಂತೋಷದಿಂದ. ಅವನಹಿಂದೆ ನಡೆದಳು.

"ನಾನೇಕೆ ಹೀಗೆ ಅನಿರೀಕ್ಷಿತವಾಗಿ ಬಂದೆ ಅಂತ ಯೋಚಿಸುತ್ತಿದೀರೇನೋ, ಅಲ್ವಾ!"

ಪ್ರಶ್ನಿಸಿದಳು.

"ನಿಮ್ಮನ್ನು ಈಗ ಇಲ್ಲಿ ನಿರೀಕ್ಷಿಸಿರಲಿಲ್ಲ ನಿಜ. ಆದರೆ ನೀವು ಬಂದಿದ್ದು ನಿಜಕ್ಕೂ ಸಂತೋಷವಾಗಿದೆ ನನ್ನ ಮನೆಗೆ ಅತಿಥಿಗಳು ಬರುವುದೇ ಕಡಿಮೆ" ಎಂದ.

"ನಿಮಗೆ ತೊಂದರೆ ಏನಿಲ್ಲವಲ್ಲ" ಸಂಕೋಚದಿಂದ ಕೇಳಿದಳು.

"ತೊಂದರೆ ಎಂಥದು ! ಒಂಟಿಯಾಗಿ ಕೂತವನಿಗೆ, ಕಾಲ ಒಂದಿಷ್ಟು ಬೇಗ ಕಳೆಯುತ್ತೆ. ನೀವು ದಿನಾ ಬಂದರೂ ನನಗೇನೂ ತೊಂದರೆ ಇಲ್ಲ" ಎಂದ ನಸುನಗುತ್ತಾ. ಸರ್ರನೆ ಅವಳು ಅವನನ್ನೇ ನೋಡಿದಳು ಅಚ್ಚರಿಯಿಂದ.

"ಏಕೆ ? ನಾನೇನಾದರೂ ತಪ್ಪು ಆಡಿದ್ನಾ ? "

"ಇಲ್ಲ, ಇಲ್ಲ , ನೀವೆಷ್ಟು ಒಳ್ಳೆಯವರು ಅಂತ ಯೋಚಿಸ್ತಿದ್ದೆ"

"ಥ್ಯಾಂಕ್ಸ್ " ಎರಡು ದಿನದ ಪರಿಚಯದಲ್ಲೇ ನಾನು ಒಳ್ಳೆಯವನು ಅಂತ ಹೇಗೆ ಹೇಳ್ತೀರಿ ? ..... ಅಥವಾ ಪರೀಕ್ಷೆ ಮಾಡ್ತಿದ್ದೀರೋ ?

"ಮನುಷ್ಯನ ಒಳ್ಳೆಯ ಗುಣ ಅವನ ನಡೆನುಡಿಯಿಂದ ಗೊತ್ತಾಗುತ್ತೆ ಅಂತ ನಮ್ಮಮ್ಮ ಹೇಳುತ್ತಿದ್ದಳು. ಆ ಮಾತು ಇವತ್ತು ನನ್ನ ಅನುಭವಕ್ಕೆ ಬಂತು. ಹೃದಯ ಪೂರ್ವಕವಾಗಿ ಹೇಳ್ತಿದೀನಿ."

"ಓ .... ಏನೋ ತುಂಬಾ ಹೊಗಳ್ತಿದೀರಿ... ಕಾರಣ ?" ಹುಬ್ಬೇರಿಸಿದ.

"ನಿಮ್ಮಿಂದ ಒಂದು ಸಹಾಯವಾಗಬೇಕಾಗಿತ್ತು. "

"ನೋಡಿದ್ರಾ ! ಏನೋ ಕಾರಣವಿಲ್ಲದೆ ನೀವು ಬಂದಿಲ್ಲ ಅಂತ ನನಗೆ ಆಗಲೇ ಅನ್ನಿಸ್ತು. ಏನೂಂತ ಹೇಳಿ ನೋಡೋಣ.... " ಇಬ್ಬರೂ ಒಳಕ್ಕೆ ಬಂದು, ಕುಳಿತರು.

"ನನಗೆ ಒಂದು ಅಮೂಲ್ಯವಾದ ಸಲಹೆ ಬೇಕಿತ್ತು. ಆದರೆ ಅದು ಏನು ಅಂತ ತಿಳಿಸುವ ಮುಂಚೆ, ನಾನು ನಮ್ಮ ಮನೆ ವಿಚಾರವನ್ನು ತಿಳಿಸಲೇ ಬೇಕು. ಆಮೇಲೆ ನನ್ನ ಬಗ್ಗೆ ನಿಮಗೆ ಏನನ್ನಿಸುತ್ತೋ ಯಾರಿಗ್ಗೊತ್ತು ?"

ಅವನು ಗಂಭೀರನಾದ. ಅವಳು ಸಂಶಯದಿಂದ ನುಡಿದಳು.

"ನೋಡಿದ್ರಾ ? ಹೇಗೆ ಗಂಭೀರವಾಗಿಬಿಟ್ಟಿರಿ. ನಾನು ಒಂಟಿಯಾದ ಕೆಟ್ಟ ಹೆಂಗಸಲ್ಲ. ನನಗೆ ಸೂಕ್ತವಾದ ಸಲಹೆ ಕೊಡುವ ಆಪ್ತರು ಯಾರಿಲ್ಲ. ನಾನು ಹೇಗೆ ಆಪ್ತ ? ಅಂತ ನೀವು ಕೇಳಬಹುದೇನೋ .... ಈ ಕಾರಣಕ್ಕಾಗಿಯೇ ದೇವರು ನನಗೆ ನಿಮ್ಮ ಪರಿಚಯ ಮಾಡಿಸಿರಬಹುದು. ಹಾಗಂತ ಭಾವಿಸ್ತೀನಿ. "

ಅವನು ಅವಳ ಮಾತುಗಳನ್ನೇ ಆಲಿಸಿದ. ಇಬ್ಬರೂ ಕುಳಿತರು. ಅವಳು ಮಾತನ್ನಾಡಿದಳು. ಅವಳು ತನಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಯಾವ ಸಂಕೋಚವಿಲ್ಲದೇ ಹೇಳಿಕೊಂಡಳು. "ಒಂದು ಮಗು ನನಗೇ ಹುಟ್ಟಲಿ ಅಂತ

ಹಂಬಲಿಸುತ್ತಾ ಇದೀನಿ.... ಎಲ್ಲಾ ಪ್ರಯತ್ನವೂ ಆಯಿತು. ಈಗ ಕಡೆಯದಾಗಿ, ಈ ಆಶ್ರಮದ ಸ್ವಾಮೀಜಿ ತಿಳಿಸಿದ ಪೂಜೆಯನ್ನು ನಡೆಸೋಣ ಎಂದುಕೊಂಡು ಬಂದೆ. ಇದೆಲ್ಲ ಸರಿಯಲ್ಲ ಅಂತೀರಾ ! ನನ್ನ ಗಂಡ ತಿಳಿಸುವಂತೆ, ಒಂದು ಮಗುವನ್ನು ದತ್ತು ತೆಗೆದುಕೊಳ್ಳುವ ಮನಸ್ಸು ನನಗಿಲ್ಲವೇ ಇಲ್ಲ. ಅದನ್ನು ತಪ್ಪು ಅಂತೀರಾ ?''

''ನಿಮ್ಮ ಯಜಮಾನರು ಹಾಗೆ ಹೇಳಲು ಏನಾದರೂ ಬಲವಾದ ಕಾರಣವಿರಬೇಕಲ್ಲವೆ? ಇದಕ್ಕೆ ನಾನೇನು ಹೇಳಲಿ ?''

''ನನಗೆ ನನ್ನದೇ ಆದ ಮಗು ಹುಟ್ಟದಿದ್ದರೆ ನನ್ನ ಮನಃಸ್ಥಿತಿಯೇ ಕೆಟ್ಟು ಹೋಗುತ್ತೆ. ಅದಕ್ಕೇ ಇದನ್ನೆಲ್ಲ ಮಾಡ್ತಿದೀನಿ. ..''

''ನಿಮ್ಮ ಯಜಮಾನರಿಗೆ ಈ ವಿಷಯಗಳನ್ನು ತಿಳಿಸಿಲ್ಲವೆ !''

''ಮುಂಚೆಯೆಲ್ಲಾ ತಿಳಿಸುತ್ತಿದ್ದೆ. ಆದರೆ, ಈಚೆಗೆ ಅವರು ಮಕ್ಕಳ ಮಾತು ಬಂದೊಡನೆ ದತ್ತು ತೆಗೆದುಕೊಳ್ಳುವ ಮಾತನಾಡಿ, ನಮ್ಮಿಬ್ಬರಿಗೂ ಮನಸ್ತಾಪ ಬಂದು ಬಿಡುತ್ತೆ. ಆದ್ದರಿಂದ ಎಷ್ಟೇ ಕಷ್ಟವಾದರೂ ಸರಿ, ಸ್ವಾಮೀಜಿ ಹೇಳಿರುವ ವಿಧಾನವನ್ನು ಅನುಸರಿಸಿ ಮಗುವನ್ನು ಹೆತ್ತು ನಾನು ತಾಯಿಯಾದೆ ಎಂದು ತೋರಿಸುವ ಹಠ ಹೆಚ್ಚಾಗಿದೆ. ''

''ಸ್ವಾಮೀಜಿ , ಅದೂ ಇದೂ ಅಂತ ನೀವು ಏನೇನೋ ನಂಬಿಕೆಯನ್ನು ಇಟ್ಟುಕೊಂಡಿರುವುದರಿಂದ ನಾನು ಏನನ್ನು ಹೇಳಲಾರೆ.ಆದರೆ ಇದಕ್ಕಿಂತ ಡಾಕ್ಟರರ ಹತ್ತಿರ ಸಲಹೆ ಪಡೆಯುವುದು ಒಳ್ಳೆಯದಲ್ಲವೆ ? ''

''ಆಗಿದೆ. ಅವರನ್ನು ನೋಡಿ ಸಲಹೆ ಪಡೆದಾಯ್ತು.... ಯಾಕೋ ಏನೋ ನಮ್ಮವರು ಆ ಆಸೇನೆ ಬಿಟ್ಟಂತೆ ಅನ್ನಿಸುತ್ತೆ. ನಾನು ಇನ್ನು ಆ ಆಸೆಗಳನ್ನು ಇಟ್ಟುಕೊಂಡಿದೀನಿ. ಆ ಆಸೆಯ ಮೇಲೇ ಈ ಆಶ್ರಮಕ್ಕೆ ಬಂದಿದ್ದು... ನಾನು ಆಸೆ ಪಡುವುದು ತಪ್ಪೇ ....? ಮಗುವನ್ನು ಬಯಸುವುದು ತಪ್ಪೇ ?''

''ತಪ್ಪೇನಿಲ್ಲ, ಆದರೆ ಈ ಪೂಜೆ, ಆಶ್ರಮ, ಸ್ವಾಮೀಜಿ..... ಇವುಗಳನ್ನೆಲ್ಲ ನಂಬುವುದು ಸರಿಯಲ್ಲ ಅಂತನ್ನಿಸುತ್ತೆ.''

''ಏಕೆ ?''

''ಎಲ್ಲವೂ ಹಣದಾಸೆಗೆ ಮಾಡುವ ಕೆಲಸ. ಅಲ್ಲದೇ ಎಲ್ಲಾ ಸ್ವಾಮೀಜಿ ಸಾಧುಗಳೂ, ನಿಷ್ಠಾವಂತರಾಗಿರ್ತಾರೆ ಅಂತ ನಾನು ನಂಬುಲ್ಲ.''

''ಎಷ್ಟೋ ಜನರಿಗೆ ಇವರ ಸಲಹೆಯಿಂದ ಒಳ್ಳೆಯದು ಆಗಿದೆಯಂತಲ್ಲ.... ಲೇಖನದಲ್ಲಿ ಪ್ರಶಂಸೆ ಮಾಡಿ ಬರೆದಿದ್ದರು. ''

''ಹಾಗಂತ ಬರೀ ಲೇಖನದಲ್ಲಿ ಓದಿರೀರಿ ಅಷ್ಟೇ. ನಿಜವಾಗಿ ಯಾರಿಗೆ ಅನುಕೂಲವಾಗಿದೆಯೋ ಅವರನ್ನು ಭೇಟಿಯಾಗಿ ಏನು ವಿಷಯ ಅಂತ ತಿಳಿದು ಕೊಂಡಿದೀರಾ ?''

"ಇಲ್ಲ, ಅವರುಗಳು ಸಿಗುತ್ತಾರೆಯೇ ?"

"ಅದರಿಂದಲೇ ನೋಡಿ.... ಏನು ವಿಷಯ ಅಂತ ತಿಳೀದೇ ಈ ತರಹ ಸಿಕ್ಕಿಕೊಳ್ಳ ಬಾರದು..... ಮನಸ್ಸು ಹೊಯ್ದಾಡುತ್ತೆ."

"ನಿಮ್ಮ ಮಾತಿನ ಅರ್ಥ .....?"

"ಇದರಲ್ಲಿ ಮೋಸ, ಕಪಟ ಎಲ್ಲಾ ಸೇರಿರುತ್ತೆ ಅಂತ ನನ್ನ ಭಾವನೆ. ಹಣ ಸುಲಿಯುವ ಸಾಧನ. ನನ್ನನ್ನು ಕೇಳಿದರೆ, ನೀವು ಮುಂದುವರೆಯದಿರುವುದೇ ಸರಿ."

ಅವಳಿಗೆ ಅವನ ಮಾತು ಹಿಡಿಸಲಿಲ್ಲ. ಹೀಗೆ ಹೇಳಿಬಿಟ್ಟನಲ್ಲ ಎಂದುಕೊಂಡು, "ನನ್ನ ಮಾತುಗಳನ್ನು ಕೇಳಿದನಂತರ, ನನ್ನ ಜತೆಯಲ್ಲಿ ಆಶ್ರಮಕ್ಕೆ ಬರ್ತೀರೇನೋ ಅಂತ ಎಂದುಕೊಂಡಿದ್ದೆ ನಾನು....."

"ನಿಮಗೆ ಜತೆ ಬೇಕಿದ್ರೆ ನಾನು ಬರ್ತೀನಿ. ಆದರೆ ಈ ಮುಂಚೆಯೂ ಒಂದೆರಡು ಸಲ ಒಂಟಿಯಾಗೇ ಹೋಗಿದೀರಲ್ಲ...."

"ಹೋಗಿದ್ದೆ. ಈಗ ಯಾಕೋ, ಸ್ವಲ್ಪ ಗಾಭರಿಯಾಯ್ತು. ಮೂರು ದಿನ ಅಲ್ಲೇ ಇದ್ದು ಅದೇನೋ ಪೂಜೆ ಮಾಡಬೇಕಂತೆ."

"ಅಲ್ಲೇ ಇರಬೇಕಾ ? ಹಾಗಾದರೆ ನೀವು ಖಂಡಿತಾ ಹೋಗಬೇಡಿ. ನಿಮಗೆ ತಿಳುವಳಿಕೆ ಸಾಲದು. ಮೂರು ದಿನ ಯಾವುದೋ ಅಪರಿಚಿತ ಸ್ಥಳದಲ್ಲಿ ಯಾರಿಗೂ ತಿಳಿಯದಂತೆ, ಇದ್ದು ವಾಪಸ್ಸು ಹೋದರೆ, ನಿಮ್ಮ ಗಂಡನಿಗೆ ನಿಮ್ಮ ಮೇಲೆ ಅನುಮಾನ ಬರುವುದಿಲ್ಲವೇ! ಇದು ಸರಿಯಲ್ಲ."

"ಅವರು ಅನುಮಾನ ಪ್ರವೃತ್ತಿಯವರಲ್ಲ."

"ಹಾಗಾದರೆ ಅವರಿಗೇ ಎಲ್ಲಾ ವಿಷಯವನ್ನು ತಿಳಿಸಿ, ಮುಂದುವರೆಯಿರಿ."

"ಆದರೆ ಅವರಿಗೆ ಈ ಪೂಜೆಗಳಲ್ಲಿ ನಂಬಿಕೆ ಇಲ್ಲ."

"ಈಗ ಈ ವಿಷಯಕ್ಕೆ ನಾನೇನೂ ಹೇಳಲಾರೆ. ಇದು ನೀವಿಬ್ಬರೂ ಗಂಡ ಹೆಂಡತಿಗೆ ಸಂಬಂಧಿಸಿದ ವಿಷಯ.... ನೀವುಗಳೇ ನಿರ್ಧರಿಸಬೇಕು."

"ನೀವು ನನಗೆ ಸಹಾಯ ಮಾಡ್ತೀನಿ ಅಂತ ಅಂದಿದ್ರಲ್ಲ... ನೀವು ಸ್ನೇಹಪರರಂತೆ ಕಂಡಿದ್ದರಿಂದ ನಿಮಗೆ ಇದನ್ನೆಲಾ ಹೇಳಿಕೊಂಡೆ... ಇಲ್ದೇ ಇದ್ದಿದ್ರೆ ಹೇಳ್ತಿರಲಿಲ್ಲ."

"ನೀವು ಹೇಳಿದ್ದು ತಪ್ಪು ಅಂತ ನಾನು ಅನ್ನುವುದಿಲ್ಲ. ಆದರೆ ನನಗೆ ಈ ವಿಷಯಗಳಲ್ಲಿ ನಂಬಿಕೆ ಇಲ್ಲ. ನಾನು ಸಾಧು ಸನ್ಯಾಸಿಗಳಿಗೆ ಪ್ರೋತ್ಸಾಹ ಕೊಡುವುದಿಲ್ಲ. ನಾಸ್ತಿಕ ಅಂತ ಬೇಕಾದ್ರೂ ಅಂದುಕೊಳ್ಳಿ."

"ಸರಿ, ಹಾಗಾದ್ರೆ ನಾನು ಒಬ್ಬಳೇ ಹೋಗ್ತೀನಿ."

"ನೀವು ಮೋಸ ಹೋಗ್ತೀರಿ ಅಂತ ನನಗೆ ಅನ್ನಿಸ್ತಿದೆ. ದಯವಿಟ್ಟು ಹೋಗದಿರುವುದೇ ಒಳ್ಳೆಯದು. ಕೇವಲ ಒಂದು ಮಗುವಿನ ಆಸೆಗೆ ಗೊತ್ತಿಲ್ಲದ ಜಾಗಗಳಿಗೆ ಒಂಟಿಯಾಗಿ ಹೋಗಬೇಡಿ.... ಯಾವುದೋ ಬಲೆಗೆ ಸಿಕ್ಕಿ ಬೀಳಬೇಡಿ."

"ನನ್ನಂಥೇ ಇನ್ನೂ ಯಾರಾದರೂ ಹೆಂಗಸರು ಬಂದಿರಬಹುದು."

"ಇರಬಹುದು. ಅಥವಾ ಇಲ್ಲದೇ ಇರಬಹುದು. ಆಗೇನು ಮಾಡ್ತೀರಿ ?"

"ಹಾಗಾದರೆ ನಾನೇನು ಮಾಡಲಿ ಈಗ ....."

"ರಾಮಾಯಣ, ಮಹಾಭಾರತಗಳನ್ನು ಓದಿ. ಭಗವದ್ಗೀತೆಯನ್ನು ಮನನ ಮಾಡಿ, ಅರ್ಥ ತಿಳಿದುಕೊಳ್ಳಿ. ಮನುಷ್ಯನಾಗಿ ಹುಟ್ಟಿದವನಿಗೆ ಎಲ್ಲಾ ಆಸೆ ಇರುವುದು ಸಹಜ. ಆದರೆ ಅದನ್ನು ತಡೆದು ನಿಲ್ಲುವ ಶಕ್ತಿಯೂ ಇರಬೇಕು. ಮದುವೆ, ಮಕ್ಕಳು ಸಂಸಾರ ಇದಿಷ್ಟೇ ಮುಖ್ಯವಲ್ಲ. ನಾಲ್ಕು ಮಕ್ಕಳಿಗೆ ಪಾಠ ಹೇಳಿಕೊಡಿ.... ನಿಮ್ಮ ಮಕ್ಕಳೇ ಎನ್ನುವ ಪ್ರೀತಿಯನ್ನು ತೋರಿಸಿ. ಹತ್ತು ಅನಾಥ ಮಕ್ಕಳಿಗೆ ಹೊಟ್ಟೆ ತುಂಬಾ ಊಟ ಹಾಕಿ. ನಿಮಗೇ ತಿಳಿಯದಂತೆ, ಒಂದು ತರಹ ತೃಪ್ತಿಯ ಅನುಭವ ನಿಮಗೆ ಬರುತ್ತೆ. ಆನಂದ ತುಂಬಿ ತುಳುಕುತ್ತೆ."

"ಇದು ನನ್ನಿಂದ ಸಾಧ್ಯವಿಲ್ಲ. ನನಗಿನ್ನೂ ವೈರಾಗ್ಯ ಬಂದಿಲ್ಲ. ಆ ವಯಸ್ಸಲ್ಲ ನನ್ನದು."

"ವೈರಾಗ್ಯ ಯಾರಿಗೆ ಬೇಕಾದರೂ ಯಾವ ವಯಸ್ಸಿನಲ್ಲಾದರೂ ಬರಬಹುದು. ಕೆಲವರು ಹುಟ್ಟುವಾಗಲೇ ಆ ಗುಣಗಳನ್ನು ಹೊಂದಿರುತ್ತಾರೆ. ಅದನ್ನೇ ರೂಢಿಸಿಕೊಂಡು ಬೆಳೆಯುತ್ತಾರೆ. ಕೆಲವರಿಗೆ ಕೆಲವು ಅನುಭವಗಳಿಂದ ಭಾವನೆಗಳು ಬದಲಾಗುತ್ತವೆ. ವೈರಾಗ್ಯ ಹುಟ್ಟುತ್ತದೆ."

"ನೀವೂ ಒಂಟಿಯಾಗಿದೀರಿ... ಈ ಪ್ರಕೃತಿಯ ಮಧ್ಯೆ ಇದೀರಿ.ಆದರೂ ನಿಮಗೆ ಯಾವ ವೈರಾಗ್ಯವೂ ಇದ್ದಂತೆ ಅನ್ನಿಸುವುದಿಲ್ಲ" ಪ್ರಶ್ನಾರ್ಥವಾಗಿ ಅವನ ಕಡೆ ನೋಡಿದಳು.

ಒಂದು ಗಳಿಗೆ ಅವನು ಸುಮ್ಮನಾದ..... ಉತ್ತರವನ್ನು ಹುಡುಕುವವನಂತೆ ಕಂಡ. ನಂತರ ನುಡಿದ. "ಹೌದು, ನಾನು ವಿರಾಗಿಯಲ್ಲ. ಆದರೆ ನಾನು ಈ ಪ್ರಕೃತಿಯನ್ನು ಪ್ರೀತಿಸುತ್ತೇನೆ. ಅವುಗಳ ಮಧ್ಯೆ ನನ್ನನ್ನು ನಾನೇ ಮರೆಯಲು ಪ್ರಯತ್ನಿಸುತ್ತೇನೆ. ಇಲ್ಲದಿದ್ದರೆ ಇಷ್ಟು ದೂರದ ಈ ಸ್ಥಳದಲ್ಲಿ ಒಂಟಿಯಾಗಿ ನಾನು ಇರಲು ಸಾಧ್ಯವಿತ್ತೆ ?"

"ಹಾಗಾದರೆ ನಿಮ್ಮ ಜೀವನದಲ್ಲಿ ಯಾವುದೋ ನಡೆಯಬಾರದ ಘಟನೆ ನಡೆದಿರಲೇ ಬೇಕು ಅಲ್ಲವೇ ?"

ಅವನು ಉತ್ತರಿಸಲಿಲ್ಲ. ಸುಮ್ಮನೆ ಅವಳ ಕಡೆ ನೋಡಿ ಸುಮ್ಮನಾದ.

"ನನ್ನನ್ನು ನಿಮ್ಮ ಸ್ನೇಹಿತೆ ಎಂದು ಭಾವಿಸಿದ್ದೀರಲ್ಲವೇ ? ಹಾಗಾದರೆ ನಿಮ್ಮ ದುಗುಡವನ್ನು

ತಿಳಿದುಕೊಳ್ಳುವ ಇಚ್ಛೆ ನನಗಾಗುತ್ತಿದೆ ಹೇಳ್ತೀರಾ ?''

''ಇಲ್ಲ ಸಂಧ್ಯಾ ನನಗೆ ಯಾವ ದುಗುಡವೂ ಇಲ್ಲ. ನಾನು ಆರಾಮವಾಗಿ, ನೆಮ್ಮದಿಯಿಂದ ಇದೀನಿ.'' ಅವಳ ಕಣ್ಣುಗಳನ್ನು ತಪ್ಪಿಸಿ ಹೇಳಿದ.

''ನೀವು ಹಾಗೆ ಹೇಳಿದರೂ ನೀವು ಆಗಾಗ ತಾಳುವ ಮೌನ ನನಗೆ ಏನನ್ನೋ ತಿಳಿಸುತ್ತೆ... ನಾನು ನಿಮ್ಮ ಮೇಲಿನ ನಂಬಿಕೆಯಿಂದ ನನ್ನ ಸಂಸಾರದ ವಿಷಯವನ್ನೆಲ್ಲ ತಿಳಿಸಲಿಲ್ಲವೇ ! ಹಾಗೇ ನೀವೂ ಹೇಳಬಹುದಲ್ಲವೆ? ''

''ಹೆಂಗಸರ ಹೃದಯದಲ್ಲಿ ರಹಸ್ಯಕ್ಕೆ ಎಡೆ ಇಲ್ಲ ಅನ್ನುವುದಕ್ಕೆ ನೀವೂ ಹೊರತಲ್ಲ. ಗಂಡಸರು ಹಾಗಲ್ಲವಲ್ಲ.''

''ಅಂದರೆ, ನಿಮ್ಮ ಹೃದಯದಲ್ಲಿ ಯಾವುದೋ ರಹಸ್ಯವಿದೆ ಎಂದಾಯ್ತು. ಹೋಗಲಿಬಿಡಿ. ನಾನು ಬಲವಂತ ಮಾಡುವುದಿಲ್ಲ. ನೀವು ಯಾವುದೋ ದುಗುಡವನ್ನು ಮುಚ್ಚಿಟ್ಟು ಎಲ್ಲವನ್ನೂ ಮರೆತು ಹಾಯಾಗಿರುವ ಸಮಯದಲ್ಲಿ ನಾನೇಕೆ ನಿಮ್ಮ ಮನಸ್ಸನ್ನು ಕೆಡಿಸಲಿ ! ನಾನು ಇನ್ನು ಹೊರಡ್ತೀನಿ'' ಎನ್ನುತ್ತಾ ಎದ್ದಳು.

''ನನ್ನ ಮಾತುಗಳಿಂದ ನಿಮಗೆ ಬೇಸರವಾಗಿರಬಹುದು. ನಿಮಗೆ ಯಾವ ಯೋಗ್ಯ ಸಲಹೆಯೂ ನನ್ನಿಂದ ಸಿಗಲಿಲ್ಲ. ಕ್ಷಮಿಸಿ'' ವಿನಯದಿಂದ ಕೇಳಿಕೊಂಡ.

''ಪರವಾಗಿಲ್ಲ ಬಿಡಿ. ನಿಮ್ಮೊಡನೆ ಇಷ್ಟು ಮಾತನಾಡಿ, ನಿಮ್ಮ ಸಮಯವನ್ನು ಹಾಳುಮಾಡಿದೀನಿ. ನನಗೂ ಎಷ್ಟೋ ತಿಳುವಳಿಕೆ ಸಿಕ್ಕಂತಾಯ್ತು....''

''ಹೌದೆ ? '' ನಕ್ಕ.

''ಹೌದು, ನನ್ನ ಗಂಡ ಎಂದೂ, ನನ್ನೊಡನೆ ಇಷ್ಟೆಲ್ಲಾ ಮಾತನಾಡಿದವರಲ್ಲ. ಆಫೀಸು, ಟೂರು ಇವುಗಳ ಮಡುವೆ ನಾನಿದೀನಿ ಅನ್ನುವುದನ್ನು ಮರೆತಿರ್ತಾರೆ. ಅಲ್ಲದೇ ನಿಮ್ಮಷ್ಟು ಜ್ಞಾನ ಅವರಿಗಿಲ್ಲ ಎಂದೆನಿಸುತ್ತೆ.''

''ಯಾಕಿರುವುದಿಲ್ಲ ? ಅವರು ಉದ್ಯೋಗದಲ್ಲಿದಾರೆ. ಟೂರು, ಆಫೀಸು ಅಂತ ಓಡಾಡಿ, ಹಣ ಸಂಪಾದಿಸ್ತಾರೆ. ಆ ವಿಷಯದಲ್ಲಿ ಅವರ ತಿಳುವಳಿಕೆ ಹೆಚ್ಚಿರುತ್ತೆ ಅಷ್ಟೆ''

''ಆ ಹಣ, ಆ ಸಂಪಾದನೆಯಿಂದ ನನಗೇನು ಪ್ರಯೋಜನ ? ನನಗಾಗಿ ಇನ್ನೆಷ್ಟು ಖರ್ಚಾದೀತು ? ನಾಲ್ಕು ಮಕ್ಕಳಾದರೂ ಇದ್ದಿದ್ದರೇ .... ''

''ನಿಮಗೆ ತುಂಬಾ ದುರಾಸೆ.... [illegible] ಮಕ್ಕಳನ್ನು ಬಯಸ್ತಿದೀರಲ್ಲ'' ನಕ್ಕ.

''ನಿಮ್ಮ ಮಾತಿನಂತೆ ವೈರಾಗ್ಯ [illegible] ನನ್ನಿಂದಂತೂ ಸಾಧ್ಯವಿಲ್ಲ.''

''ಪ್ರಯತ್ನಿಸಿ ನೋಡಿ. ದೇವರ ಧ್ಯಾನ ಮಾಡಿ.... ಒಳ್ಳೆಯ ಪುಸ್ತಕಗಳನ್ನು ಓದಿ. ಒಳ್ಳೆಯ ಕೆಲಸಗಳನ್ನು ಮಾಡಲು ನೋಡಿ. ಮನಸ್ಸು ತಾನೇ ತಾನಾಗಿ ಸ್ಥಿಮಿತಕ್ಕೆ ಬರುತ್ತೆ... ಆಸೆಗಳು ಕಡಿಮೆಯಾಗುತ್ತವೆ. ''

ಸಂಧ್ಯಾ ಬಲವಂತವಾಗಿ ನಕ್ಕಳು. ಅವನು ಪೆಚ್ಚಾದ.

"ನಿಮ್ಮಂತಹ ಸ್ನೇಹಿತರು ನನಗೆ ಇದುವರೆಗೆ ಯಾರೂ ಸಿಕ್ಕಿರಲಿಲ್ಲ."

"ನಿಮ್ಮಂತಹ ಸ್ನೇಹಿತೆಯೂ ನನಗೆ ಸಿಕ್ಕಿರಲಿಲ್ಲ." ತಟ್ಟನೇ ನುಡಿದ.

"ನಾನು ಬಂದೂ ಬಂದೂ ನಿಮ್ಮ ಸಮಯಾನ ಹಾಳು ಮಾಡ್ತಿದೀನೇನೋ ಏನು ತಿಳಿದುಕೊಳ್ತೀರೋ ಏನೊ ?"

"ಈ ಕಾಡಿನಂತಹ ಪ್ರದೇಶದಲ್ಲಿ ನಿಮ್ಮಂತ್ಹವರು ಬಂದು ನಾಲ್ಕು ಮಾತನಾಡಿದರೆ, ನನಗೂ ಒಳ್ಳೆಯದೇ. ಇಲ್ಲದಿದ್ದರೆ , ಈ ಕಾಡಿನಲ್ಲಿ ನಾನು ಒಬ್ಬ ಕಾಡುಪ್ರಾಣಿಯಾಗಿ ಬಿಡ್ತೀನಿ ಅಷ್ಟೇ...." ಮುಕ್ತವಾಗಿ ನಕ್ಕ . ಅವಳಿಗೆ ಮೋಜು ಎನಿಸಿತು.

"ಒಂಟಿಯಾಗಿರಲು ನೀವೇ ಬಯಸ್ತೀರಾ ಅಂತ ಅಂದ್ಕೊಂಡಿದ್ದೆ."

"ಒಂಟಿಯಾಗಿ ಎಲ್ಲಿದೀನಿ ? ಇಲ್ಲಿ ನನಗಿರುವಷ್ಟು ಸಂಗಾತಿಗಳು ಯಾರಿಗೂ ಎಲ್ಲಿಯೂ ಇಲ್ಲ."

"ಅಂದರೆ ?......" ಸಂದೇಹದ ನೋಟವನ್ನು ಬೀರಿದಳು.

"ಈ ತೋಟದಲ್ಲಿರುವ ಗಿಡ ಮರಗಳೆಲ್ಲ ನನ್ನ ಸಂಗಾತಿಗಳೇ... ಈ ಕಪಾಟಿನಲ್ಲಿರುವ ಪುಸ್ತಕಗಳೆಲ್ಲಾ ನನ್ನ ಅಚ್ಚುಮೆಚ್ಚಿನ ಸಂಗಾತಿಗಳು... ಗೊತ್ತಾ? "

"ಎಲ್ಲವನ್ನೂ ಓದಿದೀರಾ ? ಎಲ್ಲವೂ ನಿಮ್ಮ ಸಂಗ್ರಹವೇ ಇರ್ಬೇಕು."

"ಎಷ್ಟನ್ನೋ ಓದೇ ಇಲ್ಲ, ಕೆಲವನ್ನು ಮತ್ತೆ ಮತ್ತೆ ಓದಿದೀನಿ. ನೀವೂ ಓದುವುದಾದರೆ, ನಿಮಗೆ ಯಾವ ಪುಸ್ತಕ ಬೇಕೋ ಅದನ್ನ ಆರಿಸಿಕೊಳ್ಳಿ... ಓದಿ."

"ನನಗೆ ಓದುವ ಹವ್ಯಾಸ ಇರಲಿಲ್ಲ, ಇನ್ನು ಮೇಲೆ ಪ್ರಯತ್ನಿಸ್ತೀನಿ. ನಾನು ಓದಬಹುದಾದಂತಹ ಪುಸ್ತಕವನ್ನು ನೀವೇ ಆರಿಸಿಕೊಡಿ.... ಓದುಕ್ಕಾಗುತ್ತಾ ನೋಡ್ತೀನಿ."

"ರಾಮಾಯಣ ? ಮಹಾಭಾರತ ? ಪುರಾಣದ ಕತೆಗಳು ? ಯಾವುದು ಬೇಕು ?"

"ಬರೀ ರಾಮಾಯಣ, ಮಹಾಭಾರತದ ಬಗ್ಗೆನೇ ಹೇಳ್ತೀರಲ್ಲ, ಏಕೆ ? ಒಳ್ಳೆಯ ಬೇರೆ ಯಾವ ಕಾದಂಬರಿಗಳೂ ಇಲ್ಲವೆ ? "

"ಕಾದಂಬರಿಗಳನ್ನು ಸುಮ್ಮನೆ ಸಮಯ ಕಳೆಯಲು ಓದಬೇಕು ಅಷ್ಟೆ . ರಾಮಾಯಣ ಮಹಾಭಾರತ ಆದರೆ ಅನಾದಿಕಾಲದಿಂದ ಜನಗಳು ಓದಿಕೊಂಡು ಬಂದಿರುವ ಮುಂದಿನ ಪೀಳಿಗೆಯವರೂ ಓದಬಹುದಾದಂತಹ ಮಹಾಗ್ರಂಥಗಳು."

"ಎಲ್ಲರಿಗೂ ಅರ್ಥವಾಗಬೇಕಲ್ಲ."

"ಎಲ್ಲರಿಗೂ ಅರ್ಥವಾಗುವಂತೆ ಸರಳವಾಗಿ, ಸುಲಭವಾಗಿ, ಎಷ್ಟೊಂದು ವಿಧದಲ್ಲಿ

ಬರೆದಿದಾರೆ. ಅದೇನು ಹೀಗೆ ಮಾತನಾಡ್ತೀರಿ ? ... ಕವಿಗಳಿಗೆ , ಸಾಹಿತಿಗಳಿಗೆ ಇವುಗಳೇ ಸ್ಫೂರ್ತಿ....."

"ಅದೇನೋ ನನಗೆ ತಿಳಿಯದು. ... ನಾನು ಹೆಚ್ಚು ಪುಸ್ತಕಗಳನ್ನು ಓದಿಲ್ಲ..."

"ಬರೀ ಸಾರು, ಹುಳಿ, ಪಲ್ಯ ಮಾಡಿಕೊಂಡು ತಿಂದು ಕಾಲಹಾಕುವ ಪ್ರವೃತ್ತಿಯವರು ನೀವು. ಸಾರವತ್ತಾದ ಈ ಗ್ರಂಥದ ಬಗ್ಗೆ ನಿಮಗೇನು ತಿಳಿಯುತ್ತೆ! "

ಅವಳಿಗೆ ಅವಮಾನವಾದಂತಾಯ್ತು. ಮುಖದ ಬಣ್ಣ ಕಪ್ಪಾದುದನ್ನು ಗಮನಿಸಿ ನುಡಿದ..." ಸಾರಿ. ಸಲುಗೆಯಿಂದ ಏನೋ ಅಡಿಬಿಟ್ಟೆ. ನಿಮಗೆ ಹೇಗೆ ಸರಿಯೋ ಹಾಗೆ ಇರಿ. ಇಷ್ಟಕ್ಕೂ ನಿಮಗೆ ತಿಳುವಳಿಕೆ ಹೇಳುವ ಹಕ್ಕು ನನಗಿಲ್ಲ."

"ಹಾಗೆನ್ನಬೇಡಿ. ನನ್ನ ಸ್ನೇಹಿತರಾಗಿ ನಿಮಗೆ ಆ ಹಕ್ಕು ಇದ್ದೇ ಇದೆ. ಇರಲಿ ಸದ್ಯಕ್ಕೆ ನನಗೆ ಯಾವ ಗ್ರಂಥವನ್ನು ಓದುವ ಬಯಕೆಯೂ ಇಲ್ಲ. ಇನ್ನೆಂದಾದರೂ ಸರಿ, ನನಗೆ ಬೇಕೆನಿಸಿದಾಗ ನಿಮ್ಮ ಬಳಿಗೆ ಬಂದು ಮಾತನಾಡಿ ಹೋಗ್ತೀನಿ. ನನಗೆ ಅಷ್ಟೇ ಸಾಕು. ನಾನಿನ್ನು ಬರಲೆ ?"

"ಎಷ್ಟು ಹೊತ್ತಿಂದ ಸುಮ್ಮನೆ ಮಾತನಾಡಿ ಕಾಲ ಕಳೆದಿದೀವಿ. ಕಾಫಿ ತಿಂಡಿ..... ಏನಾದ್ರೂ ... ಅಥವಾ ಊಟಾನೇ ಮಾಡ್ತೀರೋ ?"

"ಪರವಾಗಿಲ್ಲ, ಏನೂ ಬೇಡ."

"ಹಾಗಾದ್ರೆ ನಿಮಗೇನು ಸರಿ ಅನ್ನುತ್ತೋ ನನಗೆ ಅದನ್ನೇ ಕೊಡಿ."

ಹಾಗಂದ್ರೆ ಹೇಗೆ ? ಮನೆಗೆ ಬಂದ ಅತಿಥಿಗಳನ್ನು ಹಾಗೇ ಕಳಿಸುವುದು ಧರ್ಮವಲ್ಲ.

"ಸರಿ, ಹತ್ತು ನಿಮಿಷದಲ್ಲಿ ಅಡಿಗೆ ಮಾಡಿ ಬಿಡ್ತೀನಿ. ನೀವು ಹೊರಗೆ ನಮ್ಮ ತೋಟದಲ್ಲಿ ಸುತ್ತಾಡಿ ಬನ್ನಿ.... ಗಿಡ ಮರಗಳು ಸೊಗಸಾಗಿವೆ."

ಅವಳು ಹೊರಗೆ ಹೊರಟಳು. ಇವನು ಅಡಿಗೆ ಮನೆ ಸೇರಿದ.

"ಕೆಲವೇ ನಿಮಿಷಗಳಲ್ಲಿ ಅವಳು ವಾಪಸ್ಸಾದಳು. ಅದೇನು ಇಷ್ಟು ಬೇಗ ಬಂದ್ಬಿಟ್ರಿ? ಏಕೆ ? !" ಕೇಳಿದ.

"ನಾನು ಸುತ್ತಾಡಲು ತುಂಬಾದೂರ ಹೋಗಲೇ ಇಲ್ಲ. ಇಲ್ಲೇ ಕಲ್ಲು ಬೆಂಚಿನ ಮೇಲೆ ಕೂತಿದ್ದೆ. ಬಿಸಿಲು ಸುಡ್ತು, ಎದ್ದು ಬಂದೆ."

ಅವನ ಉತ್ಸಾಹಕ್ಕೆ ತಣ್ಣೀರೆರಚಿದಂತಾಯ್ತು. ಇದೆಂತಹ ಹೆಂಗಸು ? ಪ್ರಕೃತಿಯನ್ನು ಆಶಿಸದ, ನೋಡದ, ಮೆಚ್ಚದಿರುವ ಮನಸ್ಸಾದರೂ ಎಂತಹದು ? ಎಂದುಕೊಂಡ. ಆದರೆ ಏನನ್ನೂ ಹೇಳಲಿಲ್ಲ.

ಅನ್ನ ಉಪ್ಪಿನಕಾಯಿ, ಮೊಸರು, ಚಟ್ನಿಪುಡಿ, ಚಿಪ್ಸ್ ಪೊಟ್ಟಣ ಇತ್ಯಾದಿಗಳನ್ನು ತಂದಿತ್ತ. ಟೇಬಲ್ಲಿನ ಎದುರು ಬದುರು ಕುರ್ಚಿಗಳಲ್ಲಿ ಕುಳಿತರು.

"ಇಷ್ಟೇ ಈ ದಿನದ ವಿಶೇಷ....." ಎಂದ ನಗುತ್ತಾ.

"ನಿಮ್ಮ ಸ್ನೇಹಪೂರ್ವಕವಾದ ಕೈನಿಂದ ಅದಕ್ಕೆ ವಿಶೇಷ ಮಹತ್ವ"ಎಂದಳು ಅವಳು.

ಇಬ್ಬರೂ ಅದನ್ನೇ ಬಡಿಸಿಕೊಂಡು ತಿಂದರು. ತನ್ನ ಮನೆಯ ಅಡಿಗೆಗೆ ಈ ರುಚಿ ಇಲ್ಲ ಎಂದುಕೊಂಡಳು. ಅವನು ಅದನ್ನೇ ಮತ್ತೆ ಮತ್ತೆ ಉಪಚಾರ ಮಾಡಿ ಬಡಿಸಿ, ಸಂತೃಪ್ತಿಗೊಂಡ. ತೋಟದಲ್ಲಿ ಎಷ್ಟೆಷ್ಟು ತರಕಾರಿಗಳಿವೆ. ಕಿತ್ತು ತಂದು, ಹೆಚ್ಚಿ ಬೇಯಿಸಿ ಮಾಡಲು ಸಮಯವಿರಲಿಲ್ಲವಲ್ಲ ಎಂದು ಯೋಚಿಸುತ್ತಿದ್ದ.

ಹೊಸದಾಗಿ ಪರಿಚಯವಾದ ವ್ಯಕ್ತಿಯೊಬ್ಬನ ಮನೆಯಲ್ಲಿ ಯಾವ ಅಳುಕೂ ಇಲ್ಲದೆ ಕುಳಿತು ಊಟ ಮಾಡುತ್ತಿದ್ದ ತನ್ನ ಧೈರ್ಯಕ್ಕೇ ತಾನೇ ಬೆರಗಾದಳು ಸಂಧ್ಯಾ . ಒಳಗೊಳಗೇ ಪುಳಕಗೊಂಡಿದ್ದಳು. ಯಾವುದೋ ಸೆಳೆತಕ್ಕೆ ಒಳಗಾಗಿ ಬಂದಿರುವೆನೇ ? ತಾನೇಕೆ ಊಟದ ಸಮಯದವರೆಗೂ ಕುಳಿತಿರಬೇಕಾಗಿತ್ತು ? ತಾನೇಕೆ ಇಲ್ಲಿಗೆ ಬರಬೇಕಾಗಿತ್ತು ! ಇದು ಯಾವ ಆಕರ್ಷಣೆ ಎಂದು ಅರ್ಥವಗಿರಲಿಲ್ಲ.

ನೋಡಲು ಚೆನ್ನಾಗಿದಾನೆ. ಚೆನ್ನಾಗಿ ಮಾತನಾಡುತ್ತಾನೆ. ಒಳ್ಳೆಯವನಂತೆ ಕಾಣುತ್ತಾನೆ. ಎಂದು ತಾನು ಈ ಸಲುಗೆ ವಹಿಸಿದ್ದೀನಲ್ಲ, ತನ್ನಗಂಡನಿಗೆ ತಿಳಿದರೆ ? ಎಂದು ಒಂದುಗಳಿಗೆ ಅನ್ನಿಸಿದರೂ, ತಿಳಿದರೆ ತಿಳಿಯಲಿ, ತಿಂಗಳಿನಲ್ಲಿ ಇಪ್ಪತ್ತು ದಿನ ಹೊರಗೇ ತಿರುಗುವ ಗಂಡ, ಎಂದಾದರೂ ತನ್ನ ಒಂಟಿತನವನ್ನು ಈ ರೀತಿ ಕೂತು ಹೋಗಲಾಡಿಸಿದ್ದಾನೆಯ ಎಂದು ಪ್ರಶ್ನಿಸಿಕೊಂಡು, ಇಲ್ಲ ಎಂದು ತನಗೆ ತಾನೇ ಉತ್ತರವನ್ನು ಸಹ ಹೇಳಿಕೊಂಡಳು.

"ಏನು ಯೋಚಿಸ್ತಿದೀರಿ ? ಬರೀ ಅನ್ನ... ಸೇರುತ್ತಿಲ್ಲವೇನೋ ? ನೀವು ಬರುತ್ತೀರಿ ಅಂತ ಗೊತ್ತಿದ್ದರೆ ನಮ್ಮ ತೋಟದಲ್ಲಿ ಬೆಳೆಯುವ ಎಲ್ಲಾ ತರಕಾರಿಯನ್ನು ತಂದು ಬಗೆ ಬಗೆಯಾದ ಅಡಿಗೆಯನ್ನು ಮಾಡಿ ಬಡಿಸ್ತಿದ್ದೆ"

"ಯೋಗಾನುಯೋಗವಿದ್ದರೆ, ಮತ್ತೆ ಎಂದಾದರೂ ಬಂದಾಗ ಆ ಊಟವನ್ನೂ ಮಾಡ್ತೀನಿ "ಎಂದಳು ಯಾವ ಸಂಕೋಚವಿಲ್ಲದೆ.

ಊಟ ಮುಗಿಸಿ ಅವಳುಹೊರಡುವೆನೆಂದಾಗ, ಅವನು ತಾನೂ ಎದ್ದ.

"ನಾನೂ ಸಿಟಿಗೆ ಬರ್ತೀನಿ. ಹಾಗೆ ನಿಮಗೆ ಡ್ರಾಪ್ ಕೊಡ್ತೀನಿ."

"ನಾನು ಬಂದಾಗ್ಲೆಲ್ಲ ಇದೇ ಕೆಲಸ ನಿಮಗೆ... ನನ್ನಿಂದ ತೊಂದರೆ."

"ತೊಂದರೆ ಏನು ? ಹೇಗೂ ನಮ್ಮಣ್ಣನ ಮನೆಗೆ ಹೋಗಿ ಬರುತ್ತಿದ್ದೆ."

"ಓ. ನಿಮ್ಮಣ್ಣನ ಮನೆ ಇಲ್ಲೇ ಇದೆಯೆ ! ಎಲ್ಲಿದಾರೆ ? " ವಿಚಾರಿಸಿದಳು.

'ಹೂಂ' ಎಂದವನು ಅಣ್ಣನ ಬಗ್ಗೆ ಸಂಕ್ಷಿಪ್ತವಾಗಿ ವಿವರಣೆ ನೀಡಿದ. ಅತ್ತಿಗೆಯನ್ನು ಹೆಚ್ಚಿನ ಗೌರವದಿಂದ ಹೊಗಳಿದ್ದನ್ನು ಗಮನಿಸಿದಳು. ಆದರೂ ಅವನು ತನ್ನ ಬಗ್ಗೆ ಏನನ್ನೂ ಹೇಳಿಕೊಳ್ಳಲಿಲ್ಲ.

ಇಬ್ಬರೂ ಕಾರಿನಲ್ಲಿ ಕುಳಿತು ಸಿಟಿಯ ಕಡೆಗೆ ಹೊರಟರು.

ಅವಳು ತನ್ನ ಮನೆಯ ರಸ್ತೆಯ ತಿರುವಿನಲ್ಲಿ ಇಳಿಯುವಾಗ, ಅವನು ಹೇಳಿದ.

"ನಿಮ್ಮ ಈ ಸ್ನೇಹಿತನ ಮಾತಿನಿಂದ ನಿಮ್ಮ ಮನಸ್ಸಿಗೆ ನಿರಾಶೆಯಾಗಿದ್ದರೆ ಬೇಸರಿಸಬೇಡಿ. ನಿಮ್ಮ ಸ್ನೇಹಿತನ ಮನೆಗೆ ನಿಮಗೆ ಬರಬೇಕೆನ್ನಿಸಿದಾಗ ಖಂಡಿತಾ ಬರಬಹುದು. ಯಾವಾಗಲೂ ನಿಮಗೆ ಒಳ್ಳೆಯ ಸ್ವಾಗತವಿರುತ್ತದೆ."

"ಹೂಂ, ಆಗಲಿ ಥ್ಯಾಂಕ್ಸ್"ಎಂದಷ್ಟೇ ಹೇಳಿದಳೇ ಹೊರತು "ನಮ್ಮ ಮನೆಗೆ ಬನ್ನಿ" ಎಂದು ಕರೆಯಲಿಲ್ಲ. ಅದು ಅವನ ಗಮನಕ್ಕೆ ಬಂತು. ಬಹುಶಃ ಗಂಡನಿಗೆ ತುಂಬಾ ಹೆದರುತ್ತಾಳೆ ಎಂದುಕೊಂಡ. ಇದ್ದಕ್ಕಿದ್ದಂತೆ ಅಲಕಾಳ ನೆನಪು ಬಂತು. ಅಲಕಾ ಸ್ತ್ರೀಯ ಒಂದು ರೂಪವಾದರೆ, ಇವಳು ಇನ್ನೊಂದು ರೂಪ ಎಂದುಕೊಂಡು ಕಾರನ್ನು ಅಣ್ಣನ ಮನೆಯ ಕಡೆಗೆ ಓಡಿಸಿದ.

* * * *

ಮನೆಯ ಒಳಹೊಕ್ಕು ಸಂಧ್ಯಾ ಮಾಡಿದ ಮೊದಲ ಕೆಲಸವೆಂದರೆ ಮಂಚದ ಕೆಳಗೆ ಇಟ್ಟಿದ್ದ ಹಳೆ ಪೆಟ್ಟಿಗೆಯಿಂದ ರಾಮಾಯಣ ಮಹಾಭಾರತದ ಪುಸ್ತಕಗಳನ್ನು ಆಚೆಗೆ ತೆಗೆದಿದ್ದು. ಅವಳ ಮದುವೆಯಲ್ಲಿ ಯಾರೋ ಉಡುಗೊರೆಯನ್ನಾಗಿ ಕೊಟ್ಟಿದ್ದರು. ಯಾರೆಂದು ನೋಡುವ ಗೋಜಿಗೇ ಹೋಗಿರಲಿಲ್ಲ. ಅದನ್ಯಾರು ಓದುತ್ತಾರೆ ಎಂಬ ಉದಾಸೀನದಿಂದ ಹಾಗೆ ತೆಗೆದಿಟ್ಟಿದ್ದಳು.

ಈ ದಿನ ದಿನೇಶ ಮತ್ತೆ ಮತ್ತೆ ಆ ಗ್ರಂಥಗಳ ವಿಷಯ ಪ್ರಸ್ತಾಪ ಮಾಡಿದಾಗ, ಅವನೆದುರಿಗೆ ಕುತೂಹಲವನ್ನು ತೋರದಿದ್ದರೂ, ಏನಿದೆ ಅದರಲ್ಲಿ? ತಿಳಿದಿರುವ ಕತೆಯೇ ಅಲ್ಲವೆ ಅಂತ ಎನ್ನಿಸಿದರೂ, ಚಿಕ್ಕವಳಾಗಿದ್ದಾಗ ಅವಳ ಅಜ್ಜಿ ಹೇಳಿದ್ದ ಕತೆಯ ನೆನಪು ಅಷ್ಟೇ. ಅವಳೆಂದೂ ವಿವರವಾಗಿ ಓದಿದವಳಲ್ಲ.

ಧೂಳು ಕೊಡವಿ, ಕುರ್ಚಿಯ ಮೇಲೆ ಕುಳಿತು ಪುಟಗಳನ್ನು ತೆರೆದಳು. ಓದಲು ಪ್ರಾರಂಭಿಸಿದಳು. ಚಿಕ್ಕ ಪುಸ್ತಕ. ... ಆದರೂ ಮಹಾಭಾರತದ ಕಥಾ ಸಾರವೆಲ್ಲ ಅದರಲ್ಲಿ ಅಡಗಿತ್ತು. ಒಂದೆರಡು ಪುಟಗಳ ನಂತರ ಅವಳ ಆಸಕ್ತಿ ಹೆಚ್ಚಾಗಿ, ಪುಸ್ತಕ ಮುಗಿಯುವವರೆಗೂ ಎದ್ದೇಳಲಿಲ್ಲ.

ಅದರಲ್ಲಿ ಬರುವ ಸ್ತ್ರೀ ಪಾತ್ರಗಳ ಕಡೆಗೆ ಅವಳು ಗಮನ ಕೊಟ್ಟು ಮತ್ತೆ ಮತ್ತೆ ಓದಿದಳು. ಬರೆದಿರುವ ವಿವರಣೆ ಸಾಲದು ಅಂತ ಅನ್ನಿಸಿತು. ಮೂರನೇ ದಿನ ಪಕ್ಕದ ಮನೆಯವರ ಬಳಿ ಇದ್ದ ದಪ್ಪನೆಯ, ಹೆಚ್ಚು ಪುಟಗಳ ಪುಸ್ತಕವನ್ನೂ ತಂದಳು.

ಅವರಲ್ಲಿ ಬರುವ ಸ್ತ್ರೀ ಪಾತ್ರಗಳ ಗುಣಗಳನ್ನು, ಧರ್ಮಗಳನ್ನು ಮತ್ತೆ ಮತ್ತೆ ಓದಿದಳು. ಅವರುಗಳ ಸುತ್ತ ಮುತ್ತವೇ ಮನಸ್ಸು ಹರಿದಾಡಿತು. ಈ ಬಗ್ಗೆ ಯಾರೊಡನೆಯಾದರೂ ವಿಮರ್ಶೆ ಮಾಡಲೇಬೇಕು ಅಂತ ಅನಿಸಿದಾಗ, ತನಗೆ ಈ ಹಂಬಲವನ್ನು ಹಚ್ಚಿದವನು ದಿನೇಶನೇ ಅಲ್ಲವೆ ? ಅವನೊಡನೆಯೇ ಏಕೆ ಚರ್ಚಿಸ ಬಾರದು ! ಎಂದುಕೊಂಡು, ಮಾರನೇ ದಿನವೇ ಆ ಎರಡೂ ಪುಸ್ತಕಗಳನ್ನುತನ್ನ ಜತೆಯಲ್ಲಿಟ್ಟು ಕೊಂಡು ಬಸ್ಸನ್ನು ಹತ್ತಿದಳು. ಕಾತುರದಿಂದ ಎಸ್ಟೇಟನ್ನು ತಲುಪಿದಳು. ಎಸ್ಟೇಟಿನ ಮನೆಗೆ ಬೀಗ ಹಾಕಿದ್ದನ್ನು ಕಂಡು ಅವಳ ಮನಸ್ಸು ಕುಗ್ಗಿತು. ಆದರೂ ತಕ್ಷಣವೇ ಹಿಂತಿರುಗುವ ಇಚ್ಛೆ ಇಲ್ಲದೇ ತೋಟದಲ್ಲಿ ಸುತ್ತಾಡಿದಳು. ಅಲ್ಲಿಯ ಕೆಲವು ಕೆಲಸಗಾರರು ಅವಳನ್ನೇ ಬಿಚ್ಚುಗಣ್ಣಿನಿಂದ ನೋಡಿದರು. ಅವಳು ಅಳುಕದೇ ಮುಂದೆ ಮುಂದೆ ನಡೆದಳು. ವಾಚಮನ್ ಮನೆಯ ಬಳಿ ನಿಂತು ಕುಡಿಯಲು ನೀರು ಬೇಕೆಂದು ಕೇಳಿದಳು. ಅವನ ಹೆಂಡತಿ ಅವಳು ಯಾರೆಂದು ವಿಚಾರಿಸಿದಾಗ ತಾನು ಯಜಮಾನರನ್ನು ನೋಡಬೇಕಾಗಿದೆಯೆಂದು ತಿಳಿಸಿದಳು.

ವಾಚಮನ್ ತನ್ನ ಹತ್ತಿರವಿದ್ದ ಬೀಗದ ಕೈಯನ್ನು ಕೊಟ್ಟು ಹೇಳಿದ.

" ನೀವು ಅವರನ್ನು ನೋಡಲೇಬೇಕು ಅಂತ ಇದ್ದರೆ, ಮನೆಯೊಳಗೆ ಕುಳಿತಿರಿ. ಇಲ್ಲಿ ಬಿಸಿಲ್ನಲ್ಲಿ ಏಕೆ ತಿರುಗುತ್ತೀರಿ ? "

ಅದೂ ಸರಿ ಎನಿಸಿತ್ತು. ಅವನು ಕೊಟ್ಟ ಬೀಗದ ಕೈನಿಂದ ಮನೆಯ ಮುಂಬಾಗಿಲನ್ನು ತೆರೆದು, ಒಳಗೆ ಅಡಿ ಇಟ್ಟಳು. ಅವನು ಇಲ್ಲದ ವೇಳೆಯಲ್ಲಿ ಮನೆಯೊಳಗೆ ಒಬ್ಬನೇ ಓಡಾಡುವ ಇಚ್ಛೆ ಇಲ್ಲದೆ, ಅಲ್ಲಿದ್ದ ಸೋಫಾದ ಮೇಲೆ ಕುಳಿತಳು. ಹಾಗೇ ಕಣ್ಣು ಮುಚ್ಚಿ ಮಲಗಿದವಳಿಗೆ ಚೆನ್ನಾಗಿ ನಿದ್ದೆ ಬಂದಿತ್ತು. ಹೆಜ್ಜೆಯ ಸಪ್ಪಳ ಕೇಳಿಸಿತ್ತು. ಯಾರೋ ಹತ್ತಿರ ಬಂದು ನಿಂತು ತನ್ನನ್ನೇ ಗಮನಿಸುತ್ತಿರುವ ಅರಿವಾದಾಗ, ಕಣ್ಣುಗಳನ್ನು ಬಿಟ್ಟಳು. ಎದುರಿಗೆ ದಿನೇಶ ನಿಂತಿದ್ದ. ಗಡಬಡಿಸಿ ಏಳಲು ನೋಡಿದಾಗ, ಬೀಳುವಂತಾಯ್ತು. ಅವನು ಅವಳ ಭುಜ ಹಿಡಿದು ಕೂರಿಸಿದ.

"ಪರವಾಗಿಲ್ಲ, ಕೂತ್ಕೊಳ್ಳಿ. ತುಂಬಾ ಆಯಾಸವಾಗಿರುವ ಹಾಗಿದೆಯಲ್ಲ"

"ಏನಿಲ್ಲ, ಎರಡು ದಿನದಿಂದ ನಿದ್ದೆಗೆಟ್ಟು ತುಂಬಾ ಓದಿದೆ. ಅದಕ್ಕೇ ತೂಕಡಿಕೆ, ನಿದ್ದೆ ... ಕಣ್ಣುಗಳು ಎಳೆದುಕೊಂಡು ಹೋದವು. "

"ಅಷ್ಟು ನಿದ್ದೆ ಗೆಟ್ಟು ಓದಿ ಯಾವ ಪರೀಕ್ಷೆಗೆ ಹೋಗಬೇಕು ! " ನಗೆಯಾಡಿದ.

ಅವಳೂ ನಗುತ್ತಾ ಉತ್ತರಿಸಿದಳು. "ಪರೀಕ್ಷೆ ಅಲ್ಲ, ಸೆಮಿನಾರ್. ಎರಡು ದಿನದಲ್ಲಿ ಎರಡು ಪುಸ್ತಕ ಓದಿ ಮುಗಿಸಿದೀನಿ. ನನ್ನ ಸಂದೇಹಗಳಿಗೆ ಉತ್ತರ ಬೇಕಾಗಿತ್ತು. ಅದಕ್ಕೇ ಬಂದೆ."

" ಯಾವ ಪುಸ್ತಕ ? ಏನು ಸಂದೇಹ ? "ಕುತೂಹಲದಿಂದ ಕೇಳಿದ.

"ನೀವು ಮಹಾಭಾರತ ಓದಿ ಅಂತ ಸಹ ಅಂದಿದ್ರಲ್ಲ. ಮರೆತೇ ಬಿಟ್ರಾ ?"

"ಓ ಅದಾ ? ಜತೆಗೆ ಗೀತೆ, ರಾಮಾಯಣ, ಓದಿ ಅಂತ ಅಂದಿದ್ದೇನಲ್ಲ."

"ಗೀತೆ ನನ್ನಂತಹವಳಿಗೆ ಅರ್ಥವಾಗುವುದಿಲ್ಲ. ಇನ್ನು ರಾಮಾಯಣ.... ಎಲ್ಲವನ್ನೂ ಬಿಟ್ಟು ವನವಾಸಕ್ಕೆ ಹೋದ ರಾಮನ ಕಥೆ ಓದಲು ಬೇಜಾರು..."

"ಮಹಾಭಾರತದಲ್ಲೂ ಪಾಂಡವರು ವನವಾಸಕ್ಕೆ ಹೋಗುವ ಸಂದರ್ಭ ಬರುತ್ತಲ್ಲ."

"ಆದರೆ ರಾಮ ಹೋಗುವ ಕಾರಣವೇ ಬೇರೆ... ಇಲ್ಲಿ ಪಾಂಡವರು ಹೋಗುವ ಕಾರಣವೇ ಬೇರೆ.... ಅದು ಆದರ್ಶ... ಇಲ್ಲಿ ಛಲ.... ಪ್ರಸಂಗಗಳೇ ಬೇರೆ ಬೇರೆ."

"ಅದು ಸರಿ. ಮೊದಲು ಊಟ ಆಗಿದೆಯೋ ಇಲ್ಲವೋ ಹೇಳಿ."

"ನಿಜ ಹೇಳ್ತೀನಿ ಊಟ ಇರಲಿ ತಿಂಡಿಯನ್ನು ಸಹ ತಿಂದಿಲ್ಲ, ನಾನು."

"ಓ.... ಹಾಗಾದರೆ ಮಹಾಭಾರತಂ ಅಷ್ಟೊಂದು ಪ್ರಭಾವ ಬೀರಿದೆ ಅಂತ ಅನ್ನಿ. ಹಾಗಾದರೆ ಏನು ತಗೋಳ್ತೀರಿ ? ... ಏನು ಕೊಡಲಿ ?" ಅಡಿಗೆ ಮನೆಯ ಕಡೆಗೆ ನಡೆದ.

"ಏನಾದ್ರೂ ಸರಿ, " ಅವನ ಹಿಂದೆಯೇ ನಡೆದಳು.

"ಇವತ್ತು ನಮ್ಮಣ್ಣನ ಹುಟ್ಟಿದ ಹಬ್ಬ ಅಂತ ಅಲ್ಲಿಗೇ ಊಟಕ್ಕೆ ಹೋಗಿದ್ದೆ. ರಾತ್ರಿಗೆ ಅಂತ ನಮ್ಮ ಅತ್ತಿಗೆ ಒಂದಿಷ್ಟನ್ನು ಡಬ್ಬಿಗೆ ಹಾಕಿ ಕೊಟ್ಟಿದಾರೆ. ಅದು ನಿಮಗೆ." ಎನ್ನುತ್ತಾ ಡಬ್ಬಿಯಿಂದ ತಿನಿಸುಗಳನ್ನು ಚಮಚದಲ್ಲಿ ತೆಗೆದು ತಟ್ಟೆಗೆ ಹಾಕಿದ.

"ಅದು ಸರಿಯಿಲ್ಲ, ಆಮೇಲೆ ರಾತ್ರಿ ನೀವು ಉಪವಾಸವಿರಬೇಕಾಗುತ್ತದೆ. ಅಷ್ಟೇ..."

"ಉಪವಾಸವಿರಬೇಕಾದ ಪ್ರಸಂಗವೇ ಬರುಲ್ಲ, ತೋಟದಲ್ಲಿ ಬೆಳೆಯುವ ಒಂದೊಂದು ಹಣ್ಣನ್ನು ತಿಂದರೂ, ತಿನ್ನಲು ರಾತ್ರಿಯೆಲ್ಲ ಸಾಕಾಗುಲ್ಲ. ಮೊದಲು ಊಟ ಮಾಡಿಬಿಡಿ. ಆಮೇಲೆ ಮಾತನಾಡೋಣ."

ಒಂದೊಂದೇ ಡಬ್ಬಿ ತೆಗೆದು ಅವನು ಎಲ್ಲವನ್ನೂ ಸ್ವಲ್ಪ ಸ್ವಲ್ಪ ತಟ್ಟೆಗೆ ಹಾಕಿ ಕೊಟ್ಟಾಗ, ಅವಳು ನಿಸ್ಸಂಕೋಚವಾಗಿ ತಿಂದಳು "ಎಲ್ಲಾ ತುಂಬಾ ಚೆನ್ನಾಗಿದೆ" ಎಂದಳು.

"ನಮ್ಮ ಅತ್ತಿಗೆ ಹಾಗೇನೇ. ಎಲ್ಲಾ ಕೆಲಸಗಳಲ್ಲೂ ಪರ್‌ಫೆಕ್ಟ್" ಎಂದ ಅಭಿಮಾನದಿಂದ.

ಅವಳು ಊಟ ಮುಗಿಸಿದಳು. ಹೊರಗೆ ಇಬ್ಬರೂ ಕುಳಿತ ನಂತರ ನಿಧಾನವಾಗಿ ಕೇಳಿದ.

"ಮಹಾಭಾರತವನ್ನು ಓದಿ ಮುಗಿಸಿದೆ ಅಂತ ಅಂದ್ರಲ್ಲ, ಸುಮ್ಮನೆ ಓದಿದಿರೋ.... ಅಥವಾ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದಿರೋ ?"

"ಸ್ವಲ್ಪ ಮಟ್ಟಿಗೆ ಅರ್ಥವೂ ಆಯ್ತು."

"ಹಾಗಾದರೆ, ಅದರಲ್ಲಿ ಯಾವ ಪಾತ್ರ, ಯಾವ ಸಂದರ್ಭ ನಿಮಗೆ ಇಷ್ಟವಾಯ್ತು ಅಂತ ಹೇಳಿ. ಅದನ್ನು ಕುರಿತೇ ಚರ್ಚಿಸೋಣ."

"ಸ್ತ್ರೀ ಪಾತ್ರಗಳು. .... ಎಲ್ಲಾ ಸ್ತ್ರೀ ಪಾತ್ರಗಳೂ, ಅವರಿಗೆ ಒದಗುವ ಸಂದರ್ಭಗಳು ನನಗೆ ಹಿಡಿಸಿದವು." ಅವನು ಹುಬ್ಬೇರಿಸಿದ.

"ನನಗೆ ಆಶ್ಚರ್ಯವಾಗುತ್ತೆ. ನೀವೂ ಒಬ್ಬ ಹೆಂಗಸಾಗಿ, ಸ್ತ್ರೀ ಪಾತ್ರ ಮೆಚ್ಚಿಕೆ ಆಯ್ತು ಅಂತ ಅಂದರೆ..."

"ಏಕೆ ? ಅದು ಅಸಹಜವೆ ?"

"ಹಾಗೇನಿಲ್ಲ, ಒಳ್ಳೆಯದೇ ಆಯ್ತು ಬಿಡಿ. ಏಕೆ ಮೆಚ್ಚುಗೆಯಾಯ್ತು ಅಂತ ಕಾರಣಾನೂ ತಿಳಿಸ್ತೀರಾ ?"

ಅವಳು ಒಂದು ಗಳಿಗೆ ಅನುಮಾನಿಸಿ ಕೇಳಿದಳು.

"ನಿಮಗೆ ಮದುವೆಯಾಗಿದೆಯೆ ?"

ಅವನು ಆಶ್ಚರ್ಯದಿಂದ ಹುಬ್ಬೇರಿಸಿ ನಕ್ಕ.

"ನನ್ನ ಮದುವೆಗೂ, ಮಹಾಭಾರತದ ಚರ್ಚೆಗೂ ಏನು ಸಂಬಂಧ ?"

"ಸಂಬಂಧ ಇದೆ. ಮದುವೆ ಆಗಿದ್ದರೆ, ಒಬ್ಬ ಹೆಂಗಸಿನ ಮನಸ್ಸಿನ ದುಗುಡ, ದುಮ್ಮಾನ, ಸಂತೋಷ, ನಲಿವಿನ ಅನುಭವವಿರುತ್ತೆ ಅಂತ....."

ಅವನ ಮುಖ ಗಂಭೀರವಾಯ್ತು. ಅವಳು ಪೆಚ್ಚಾದಳು.

"ದಯವಿಟ್ಟು ಕ್ಷಮಿಸಿ. ನಿಮ್ಮ ಮನಸ್ಸಿಗೆ ಬೇಜಾರಾಯ್ತು ಅಂತ ಕಾಣಿಸುತ್ತೆ"

"ಬೇಜಾರು ಆದದ್ದೇನೋ ನಿಜ. ಆದರೆ ನಿಮ್ಮ ಮಾತಿನಿಂದ ಅಲ್ಲ, ನನ್ನ ಹೆಂಡತಿಯ ದುಗುಡ ದುಮ್ಮಾನ ಏನು ಅಂತ ನನಗೆ ಸರಿಯಾಗಿ ತಿಳಿಯಲೇ ಇಲ್ಲವಲ್ಲ ಅಂತ..."

"ಅಂದರೆ ? ನಿಮಗೆ ಮದುವೆಯಾಗಿದೆ ಅಂತ. ಆದರೆ ನಾನು ಎಂದೂ ಅವರನ್ನು ಕಾಣಲೇ ಇಲ್ಲ, ಅವರು ಊರಿಗೆ ಹೋಗಿದಾರಾ ?"

"ಇಲ್ಲ, ಅವಳು ಇಲ್ಲಿ ನನ್ನ ಜತೆಯಲ್ಲಿ ಇಲ್ಲ... ನಾವಿಬ್ಬರೂ ಒಟ್ಟಿಗೆ ಇಲ್ಲ."

ಅವಳಿಗೆ ಏನು ಹೇಳಬೇಕೋ ತಿಳಿಯದಾಯಿತು. ಕಸಿವಿಸಿಗೊಂಡಳು.

"ನಾನು ನನ್ನ ಬಗ್ಗೆ, ನನ್ನ ಜೀವನದ ಬಗ್ಗೆ ಯಾರಿಗೂ ಹೇಳಿಕೊಳ್ಳೋ ಅವಕಾಶವೇ ಒದಗಿರಲ್ಲಿ, ಈಗ ತಿಳಿಸೇ ಬಿಡ್ತೀನಿ, ಕೇಳಿಬಿಡಿ."

"ಪರವಾಗಿಲ್ಲ, ಬೇಡ ಬಿಡಿ... ನನಗೆ ನಿಮ್ಮನ್ನು ನೋಯಿಸುವ ಇಚ್ಛೆಯಂತೂ ಖಂಡಿತಾ ಇಲ್ಲ." ಆದರೂ ಅವಳ ಮಾತಿಗೆ ಗಮನವೀಯದೆ ಅವನು ತನ್ನ ಗತ ಜೀವನದ

ಬಗ್ಗೆ ಹೇಳಿಕೊಳ್ಳಲಾರಂಭಿಸಿದ. ಸಂಕ್ಷಿಪ್ತವಾಗಿ ಎಲ್ಲ ಹೇಳಿ ಮುಗಿಸಿದ. ನಂತರ ಕೇಳಿದ....

''ಈಗ ಹೇಳಿ, ನೀವು ಓದಿದ ಮಹಾಭಾರತದಲ್ಲಿ ನನ್ನ ಪಾತ್ರಕ್ಕೆ ಯಾವ ಪಾತ್ರ, ನನ್ನ ಹೆಂಡತಿಯ ಪಾತ್ರಕ್ಕೆ ಯಾವ ಸ್ತ್ರೀ ಪಾತ್ರ ಹೋಲುತ್ತದೆ ಅಂತ.''

ಅವಳು ಪೆಚ್ಚಾದಳು. ''ರಿಯಲಿ ಸಾರಿ. ಹೀಗೆ ಒಂದು ವಿಷಯ ಇರಬಹುದು ಎನ್ನುವ ಕಲ್ಪನೆ ಸಹ ನನಗಿರಲಿಲ್ಲ.''

''ಹೀಗೆ ನಡೆಯಬಹುದು ಎಂಬ ಸುಳಿವು ಸಹ ನನಗಿರಲಿಲ್ಲ. ಸುಮಾರು ಒಂದು ಒಂದೂವರೆ ವರ್ಷದ ವೈವಾಹಿಕ ಜೀವನವಷ್ಟೇ .... ಅದೊಂದು ಕನಸು ಎಂದು ಮರೆಯುವುದಕ್ಕೆ ಪ್ರಯತ್ನಿಸುತ್ತಾ ಒಂಟಿಯಾಗಿ ನಾನು ಇಲ್ಲಿದೀನಿ. ನನ್ನ ಮಗಳು ನನ್ನ ಅಣ್ಣನ ಮನೆಯಲ್ಲಿ ಅವರ ಮಗಳಾಗಿ ಬೆಳೆಯುತ್ತಿದ್ದಾಳೆ...''

''ಓ ಅದರಿಂದಲೇ ನಿಮಗೆ ಹೆಂಗಸರ ಬಗ್ಗೆ ನಂಬಿಕೆ ಇಲ್ಲದಿರಬಹುದು... ಹೌದಾ?''

''ಛೆ, ಛೆ, ನಾನು ಹಾಗೆಲ್ಲಿ ಮಾತನಾಡಿದೆ? ನನ್ನ ಅತ್ತಿಗೆ ಮೇಲೆ ನನಗೆ ಅಪಾರ ವಿಶ್ವಾಸವಿದೆ. ನಿಮ್ಮ ಬಗ್ಗೆಯೂ ನನಗೆ ವಿಶ್ವಾಸವಿದೆ.''

ಅವಳಿಗೆ ಸಂಕೋಚವೆನಿಸಿತು. ತಲೆ ತಗ್ಗಿಸಿದಳು. ಅವಳು ಸುಮ್ಮನಾದುದನ್ನು ಕಂಡು ಕೇಳಿದ.

''ಯಾಕೆ ಸುಮ್ಮನಾಗಿ ಬಿಟ್ರಿ ? ನಿಮ್ಮ ಯಾವುದೋ ಸಮಸ್ಯೆಗೆ ನನ್ನ ಈ ಮಾತುಗಳಿಂದ ಖಂಡಿತಾ ಪರಿಹಾರ ಸಿಕ್ಕುವುದಿಲ್ಲ ಅಲ್ಲವೆ ?''

''ಈಗ ಅನ್ನಿಸುತ್ತೆ, ನಾನು ಮಾತನಾಡದಿರುವುದೇ ಒಳ್ಳೆಯದೇನೋ ಅಂತ ಯಾಕೇ ಅಂದ್ರೆ ....''

''ಪರವಾಗಿಲ್ಲ ಹೇಳಿ. ನೀವು ಏನೇ ಮಾತನಾಡಿದರೂ, ನಿಮ್ಮ ಬಗ್ಗೆ ನನಗಿರುವ ಭಾವನೆ ಏನೂ ಬದಲಾಗುವುದಿಲ್ಲ''

''ಹಾಗಾದ್ರೆ.... ನಿಯೋಗದ ಬಗ್ಗೆ ನಿಮ್ಮ ಅನಿಸಿಕೆ ಏನು ?'' ತಲೆ ತಗ್ಗಿಸಿಯೇ ಪ್ರಶ್ನಿಸಿದಾಗ ಅವನು ಬೆರಗಾದ. ಆ ಬಗ್ಗೆ ಅವಳು ಪ್ರಶ್ನಿಸಬಹುದು ಎಂದು ಅವನು ಖಂಡಿತಾ ಊಹಿಸಿರಲಿಲ್ಲ.

''ಅದರ ಬಗ್ಗೆ ಚರ್ಚೆ ಈಗ ಏಕೆ ? ಅದು ಈ ಕಾಲಕ್ಕೆ ಅನ್ವಯಿಸುವುದಿಲ್ಲ'' ಎಂದ ಅವಳ ಕಡೆ ನೋಡದೆ.

''ಅನ್ವಯಿಸದಿದ್ದರೇನು..... ಅದರ ಬಗ್ಗೆ ಮಾತನಾಡಬಹುದಲ್ಲ....''

''ಅದು ಆ ಕಾಲದ ಒಂದು ಪದ್ಧತಿ. ಅದಕ್ಕೆ ಸಮಾಜದ ಮನ್ನಣೆ ಇತ್ತು. ಮುಖ್ಯವಾಗಿ ರಾಜ ಮನೆತನದವರು ವಂಶೋದ್ಧಾರಕ್ಕಾಗಿ ಅಲ್ಲದೇ ಉತ್ತರಾಧಿಕಾರಿಗಾಗಿ ತಾವೇ ಮಾಡಿಕೊಂಡಿದ್ದ ಒಂದು ನಿಯಮ. ಅದು''

"ಆ ಪದ್ಧತಿ ಈ ಕಾಲದಲ್ಲೂ ಇದ್ದಿದ್ದರೆ ಏನಾಗುತ್ತಿತ್ತು!"

"ಈಗ ? ಅದರ ಅಗತ್ಯವೇನಿದೆ? ಏನಿಲ್ಲದೇನೇ ಪ್ರಜಾಸಂಖ್ಯೆ ಜಾಸ್ತಿಯಾಗಿದೆ.... ಯಾವ ರಾಜ್ಯಭಾರವನ್ನು ಆಳುವುದಕ್ಕೆ ಆ ಪದ್ಧತಿಯ ಅಗತ್ಯ ಯಾರಿಗೆ ಬೇಕಾಗಿದೆ ....?"

"ನನ್ನಂತಹವಳಿಗೆ ಅದರಿಂದ ಅನುಕೂಲವಾಗುತ್ತಿತ್ತೋ ಏನೋ !"

ಅವನು ತಟ್ಟನೆ ಅವಳ ಕಡೆ ನೋಡಿದ. ಅವಳು ಯಾವ ಸಂಕೋಚವೂ ಇಲ್ಲದೇ ಅವನನ್ನೇ ದಿಟ್ಟಿಸುತ್ತಿದ್ದಳು. ಅವನೇ ತಲೆ ತಗ್ಗಿಸಿದ.

"ಏಕೆ ಸುಮ್ಮನಾದಿರಲ್ಲ...." ಮತ್ತೆ ಕೇಳಿದಳು.

"ನೀವು ಇಂತಹ ಒಂದು ಪ್ರಶ್ನೆ ಕೇಳಬಹುದು ಅಂತ ನಾನು ಖಂಡಿತಾ ಭಾವಿಸಿರಲಿಲ್ಲ. ನನಗೆವಿನು ಹೇಳಬೇಕು ಅಂತ ತೋಚುತ್ತಿಲ್ಲ."

"ಪರವಾಗಿಲ್ಲ ಹೇಳಿ. ನಾನು ಮದುವೆಯಾದವಳು. ಗಂಡ ಇರುವವಳು. ಈ ರೀತಿ ಯೋಚಿಸುವುದೂ ತಪ್ಪಲ್ಲವೇ !ಆದರೂ ಆ ಕಾಲದಲ್ಲಿ ಆಚರಣೆಯಲ್ಲಿದ್ದ ಪದ್ಧತಿಯನ್ನು ಈ ಕಾಲದಲ್ಲಿ ಯಾಕೆ ಆಚರಿಸಬಾರದು ! ".

"ಅದು ನಿಯಮಬಾಹಿರವೆನಿಸುತ್ತದೆ."

"ನಿಯಮಕ್ಕೆ ತಲೆಬಾಗಿ ಎಷ್ಟು ಜನ ಇದಾರೆ ?"

"ಅದು ಅವರವರ ಮನೋಧರ್ಮವನ್ನು ಅವಲಂಬಿಸಿರುತ್ತೆ. ನೀವು ಒಬ್ಬ ಸುಶಿಕ್ಷಿತ ಹೆಂಗಸು. ಹೀಗೆ..... ಯೋಚಿಸುವುದು ತಪ್ಪು."

"ಯಾಕೆ ? ಒಬ್ಬ ಸುಶಿಕ್ಷಿತೆ , ತನಗೆ ಅನ್ನಿಸಿದ್ದನ್ನು ಯೋಚಿಸಬಾರದು ಅಂತ ನಿಯಮ ಏನಾದ್ರೂ ಇದೆಯೇ ? ಅಥವಾ ಆಡಿದರೆ ಅಶ್ಲೀಲ ಅಂತ ಅನ್ನಿಸುತ್ತೇ ?"

"ಈ ವಿಷಯವನ್ನು ನೀವೂ ನಿಮ್ಮ ಪತಿಯೊಡನೆ ಏಕೆ ಚರ್ಚಿಸಬಾರದು ?"

"ನೀವೇ, ಒಬ್ಬ ಪರಪುರುಷ, ಈ ಮಾತು ಸರಿಯಲ್ಲ ಅಂತ ಪರೋಕ್ಷವಾಗಿ ಹೇಳುತ್ತಿರುವಾಗ, ನನ್ನ ಸ್ವಂತ ಗಂಡ ಸುಮ್ಮನಿರುತ್ತಾರೆಯೆ !"

"ಹೋಗಲಿ ನಿಮಗೇಕೆ ಈ ಆಲೋಚನೆ ಬಂತು ಹೇಳಿ...?"

"ಕಾರಣ ಏನೇ ಇರಲಿ, ಸತ್ಯವತಿ ತನ್ನ ಸೊಸೆಯರಿಗೆ ನಿಯೋಗದಿಂದ ಸಂತಾನ ಸಿಗುವ ಸೌಭಾಗ್ಯವನ್ನು ಒದಗಿಸಿಕೊಟ್ಟಳು. ಅನಂತರ ಕುಂತಿ, ತನ್ನ ಗಂಡ ನಿಷ್ಪ್ರಯೋಜಕನೆಂದು ತಿಳಿದ ಕುಂತಿ ದೇವತೆಗಳ ಸಹಾಯದಿಂದ ಮಕ್ಕಳನ್ನು ಹೆತ್ತಳು.... ಅದು ತಪ್ಪೇನಲ್ಲವಲ್ಲ...."

"ಕುರುವಂಶಕ್ಕೆ ಉತ್ತರಾಧಿಕಾರಿಗಳು ಬೇಕಾಗಿದ್ದರಿಂದ ಸತ್ಯವತಿ ತಾನಾಗಿಯೇ ಈ ಕಾರ್ಯವನ್ನು ನಿಯೋಜಿಸಿದಳು. ಕುಂತಿ, ಪಾಂಡುರಾಜನ ಅನುಮತಿಯನ್ನು ಪಡೆದು, ಮಕ್ಕಳನ್ನು ಪಡೆದಳು. ಆ ಯುಗದಲ್ಲಿ ಅದಕ್ಕೆ ಅವಕಾಶವಿತ್ತು."

"ಆದರೂ, ಅಂಬಿಕೆ, ಅಂಬಾಲಿಕೆಯರಿಗೆ, ಕುಂತಿಗೆ, ಮಾದ್ರಿಗೆ, ಮಕ್ಕಳನ್ನು ಹೊತ್ತು ಹೆತ್ತು ಬೆಳೆಸುವ ಪುಣ್ಯ ದೊರಕಿತು. ಅದಕ್ಕಿಂತ ಬೇರೆ ಆನಂದ ಇನ್ನೇನಿದೆ ?"

"ಇದರ ಬಗ್ಗೆ ನೀವು ನಿಮ್ಮ ಪತಿಯೊಂದಿಗೆ ಮಾತನಾಡುವುದೇ ಒಳ್ಳೆಯದು. ನಾನೇನು ಹೇಳಲಿ ? " ಅವನು ಗಲಿಬಿಲಿಗೊಂಡು ನುಡಿದ.

"ಅವರು ಒಪ್ಪುವುದಿಲ್ಲ. ನನಗೆ ಗೊತ್ತು. ಆದ್ದರಿಂದ ನಾನೇ ಒಂದು ತೀರ್ಮಾನಕ್ಕೆ ಬಂದಿದೀನಿ. "

ಏನದು ಎಂದು ಅವನು ಕೇಳಲಿಲ್ಲ. ಆದರೂ ಅವಳ ಆಸೆ ಏನೆಂದು ಅವನಿಗೆ ತಿಳಿದು ಹೋಯಿತು.

ಇದು ತಪ್ಪು ಎಂದು ಅವಳಿಗೆ ತಿಳುವಳಿಕೆಯನ್ನು ಹೇಳುವ ಮನಸ್ಸಾಯಿತು. ತಡೆ ತಡೆದು ಹೇಳಿದ.

"ಈ ಮನೋಭಾವ ಸರಿಯಲ್ಲ. ಕಪಟ ಸಾಧುಗಳು, ಪೂಜೆ, ಅದೂ ಇದೂ ಅಂತ ಹೆಂಗಸರನ್ನು ಸಂಮೋಹನಗೊಳಿಸಿ, ಮಾಡುವುದಾದರೂ ಇನ್ನೇನು ? ನಿಮ್ಮಂತಹ ಹೆಂಗಸರನ್ನು ನಂಬಿಸಿ ಮರುಳುಗೊಳಿಸಿ, ಸಂಬಂಧ ಬೆಳೆಸಿ, ಮಕ್ಕಳಾಗುವಂತೆ ಮಾಡುತ್ತಾರೆ. ನಿಮ್ಮಂತಹವರು ಅದನ್ನು ಸ್ವಾಮೀಜಿ ಕರುಣಿಸಿದ ವರ, ಫಲ ಎಂದು ನಂಬುತ್ತೀರಿ. ಅದಕ್ಕೆ ತಿಳುವಳಿಕೆಯುಳ್ಳ ಗಂಡಂದಿರು, ಹೆಂಗಸರು ಹೀಗೆ ಹಾಳಾಗದಂತೆ ತಡೆಯುವುದು."

ಅವಳು ಅವನ ಮಾತಿನ ಕಡೆಗೆ ಗಮನ ಕೊಟ್ಟಂತೆ ಅನ್ನಿಸಲಿಲ್ಲ. ಅವನಿಗೆ ಹೆದರಿಕೆ ಆಯಿತು. ಇದ್ದಕ್ಕಿದ್ದಂತೆ ಅವಳು ಬಿಕ್ಕಿ ಬಿಕ್ಕಿ ಅತ್ತಳು. ಸ್ವಲ್ಪ ಸಮಾಧಾನಗೊಂಡ ನಂತರ ನುಡಿದಳು.

"ನನ್ನನ್ನು ಕ್ಷಮಿಸಿ. ನಾನು ಏನೇನೋಮಾತನ್ನಾಡಿ ಬಿಟ್ಟೆ"

"ಪರವಾಗಿಲ್ಲ ಬಿಡಿ, ಆದರೆ ಇನ್ನ್ಯಾರ ಹತ್ತಿರಾನೂ ಈ ತರಹದ ಮಾತುಗಳನ್ನಾಡಬೇಡಿ. ಸಾಧು ಸಂತರು ಅಂತ ಮೋಸ ವಂಚನೆಗೆ ಬಲಿಯಾಗಬೇಡಿ. ನಿಮ್ಮ ಯಜಮಾನರು ಹೇಳಿದಂತೆ ಯಾವುದಾದರೂ ಮಗುವನ್ನು ದತ್ತು ತೆಗೆದುಕೊಂಡು.....ಅವನ ಮಾತನ್ನು ಅಷ್ಟಕ್ಕೆ ಕತ್ತರಿಸಿ ಕಿರುಚಿದಳು."

"ನೋ.... ಆ ಮಾತನ್ನು ಮಾತ್ರ ಹೇಳಬೇಡಿ. ... " ಧಿಗ್ಗನೆ ಎದ್ದುನಿಂತಳು. "ನನ್ನ ಬಗ್ಗೆಯಾರಿಗೂ ಕರುಣೆ ಇಲ್ಲ, ನನ್ನ ಮನಸ್ಸಿನ ದುಃಖ ಏನು ಅಂತ ಯಾರಿಗೂ ತಿಳಿಯುವುದಿಲ್ಲ." ಮತ್ತೆ ಅಳತೊಡಗಿದಳು.

"ಪ್ಲೀಸ್, ಅಳಬೇಡಿ. ಸಮಾಧಾನ ಮಾಡಿಕೊಳ್ಳಿ....ನನ್ನ ಮಾತಿನಿಂದ ನಿಮಗೆ ನೋವಾಗಿದ್ದರೆ ಹೇಳಿ, ನಾನು ಇನ್ನು ಮೇಲೆ ಇಂತಹ ಮಾತುಗಳನ್ನಾಡುವುದಿಲ್ಲ. ನಿಮಗೆ ಬೇಸರವನ್ನುಂಟು ಮಾಡುವುದಿಲ್ಲ."

ಅವಳು ಅವನ ಬಳಿಗೆ ಬಂದು ನಿಂತಳು.

"ನಾನು ಇಷ್ಟು ಮಾತನಾಡಿದರೂ ನನ್ನ ಮನಸ್ಸಿನಲ್ಲೇನಿದೆ ಅಂತ ನಿಮಗೆ ಅರ್ಥವಾಗಲಿಲ್ವಾ ?"

ಅವನು ಬೆದರಿದ. ಅವನು ಎರಡು ಹೆಜ್ಜೆ ಹಿಂದೆ ಸರಿದ...

"ನನಗೆ ನೀವು ಬೇಕು.... ನೀವು ಬೇಕೇಬೇಕು" ಎನ್ನುತ್ತಾ ಬಾಗಿ ಅವನನ್ನು ತಬ್ಬಿಕೊಂಡಳು.

ಅವನು ಅವಳನ್ನು ತಳ್ಳಿ, ಸಿಡಿದು ದೂರ ನಿಂತು ಸಿಡುಕಿದ.

"ಇದೇನಿದು? ನಿಮ್ಮ ವರ್ತನೆ ಸರಿಯಲ್ಲ. ಪ್ಲೀಸ್ ದೂರ ಹೋಗಿ."

"ಏಕೆ ? ಏನಾಯ್ತು? ನಾನು ಹೆಣ್ಣು. ನನಗೂ ಆಸೆಗಳಿವೆ."

"ನಿಮ್ಮ ಆಸೆಯನ್ನು ನಾನು ಒಪ್ಪುವುದಿಲ್ಲ."

"ಏಕೆ ? ಹೆಣ್ಣು ನಾನಾಗಿಯೇ ನಿಮ್ಮನ್ನು ಬಯಸುತ್ತಿರುವಾಗ, ಒಪ್ಪದಿರುವುದಕ್ಕೆ ಏನು ಕಾರಣ ಅಂತ ಕೇಳಬಹುದೆ ?"

"ನನಗೆ ಅಂತಹ ಯಾವ ಆಸೆಗಳೂ ಇಲ್ಲ. ನನ್ನ ಹೆಂಡತಿ ನನ್ನಿಂದ ದೂರ ಹೋದ ದಿನದಿಂದ ನಾನು ಒಂಟಿಯಾಗಿದ್ದರೂ, ಬ್ರಹ್ಮಚಾರಿಯಂತೆ ಕಟ್ಟುನಿಟ್ಟಾಗಿ, ಸಂಯಮದಿಂದ ನಡೆದುಕೊಂಡಿದ್ದೇನೆ. ಯಾವ ಹೆಂಗಸರನ್ನು ನಾನು ಆಸೆ ಕಣ್ಣುಗಳಿಂದ ಸಹ ನೋಡಿಲ್ಲ."

"ನಾನು ಇದನ್ನು ನಂಬುವುದಿಲ್ಲ."

"ನಂಬದಿರವಂತೆ, ಎಂದಾದರೂ ನಾನು ವರ್ತಿಸಿದ್ದೇನೆಯ ? ನನ್ನ ನಿಮ್ಮ ಸ್ನೇಹ ಕೆಲವು ದಿನಗಳಿಂದ ಮುಂದುವರೆದಿದೆ. ಎಂದಾದರೂ ಅನುಚಿತವಾಗಿ ನಡೆದು ಕೊಂಡಿದೇನೆಯೇ ?..."

"ಇಲ್ಲ, ಆದ್ದರಿಂದಲೇ ನನಗೆ ನಿಮ್ಮ ಬಗ್ಗೆ ಹೆಚ್ಚಿನ ವಿಶ್ವಾಸ, ಅದು ಅಲ್ಲದೇ ಆಸಕ್ತಿಯೂ ಹೆಚ್ಚಿನದು..."

"ನಿಮ್ಮ ವಿಶ್ವಾಸಕ್ಕೆ ಗೌರವಕ್ಕೆ ನಾನು ಚಿರಋಣಿ. ಆದರೆ ಇಂತಹ ವಿಷಯಳಿಂದ ನನ್ನನ್ನ ದೂರವೇ ಇಟ್ಬಿರಿ....ನನ್ನನ್ನ ಎಳೆಯಬೇಡಿ."

"ನೀವು ನಿಮ್ಮ ಹೆಂಡತಿಯನ್ನು ದೂರವೇ ಇಟ್ಟಿದ್ರಾ ?"

ಅವಳ ಈ ಪ್ರಶ್ನೆಗೆ ಅವನು ಕೋಪಗೊಂಡರೂ ತಕ್ಷಣವೇ ತನ್ನನ್ನು ತಾನು ಸಂಭಾಳಿಸಿಕೊಂಡ.

"ನೀವು ಇಂತಹ ಪ್ರಶ್ನೆಗಳನ್ನು ಕೇಳಬಾರದು. ಅದು ಸ್ವಂತ ವಿಷಯ."

"ನಾನು ಲಜ್ಜೆಗೆಟ್ಟ ಭಂಡ ಹೆಣ್ಣು ಅಂತ ನೀವು ತಿಳಿದರೂ ಪರವಾಗಿಲ್ಲ, ನನ್ನ ಪ್ರಶ್ನೆಗೆ ಉತ್ತರ ಕೊಡಿ. ಅಥವಾ ನಿಮ್ಮಿಂದ ದೊರೆಯದೆ ಇರವ ಪ್ರೀತಿಗೆ ನಿರಾಶೆಗೊಂಡು ನಿಮ್ಮ

ಪತ್ನಿ ನಿಮ್ಮಿಂದ ದೂರ ಹೋದರೋ ಏನೋ''

''ನನ್ನ ಒಳ್ಳೆಯತನವನ್ನು ದುರುಪಯೋಗ ಪಡಿಸಿಕೊಂಡು ಏನೇನೋ ಮಾತನ್ನಾಡುತ್ತಿದೀರಿ ನೀವು...... ನನಗೆ ಸರಿ ಅಂತ ಅನ್ನಿಸ್ತಿಲ್ಲ.''

''ಹೌದು, ನೀವು ಒಳ್ಳೆಯವರು. ಆದ್ದರಿಂದಲೇ ನಾನು ನಿಮ್ಮನ್ನು ಬಯಸುತ್ತಿರುವುದು. ಏನೇ ಆದರೂ ಸರಿ, ನೀವು ನನ್ನ ಆಸೆಯನ್ನು ಈಡೇರಿಸಲೇ ಬೇಕು.''

''ನಾನು ಒಪ್ಪದಿದ್ದರೆ....''

''ಆಗ ನಿಮ್ಮ ಬಗ್ಗೆ ನನ್ನ ಅನುಮಾನ ಹೆಚ್ಚಾಗುತ್ತೆ. ನಿಮ್ಮಲ್ಲೂ ಏನೋ ದೋಷವಿದೆ. ಅದರಿಂದಲೇ ನಿಮ್ಮ ಹೆಂಡತಿ ನಿಮ್ಮ ಜತೆ ಇಲ್ಲ ಎಂದು ಭಾವಿಸ್ತೀನಿ...''

''ಸಂಧ್ಯಾ ! ಏನಿದು ? ಹೀಗೆಲ್ಲಾ ಆರೋಪ ಹೊರಿಸಬೇಡಿ'' ಕೋಪದಿಂದ ಹೇಳಿದ.

''ನನ್ನ ಮಾತುಗಳಿಂದ ನೀವು ಕೆರಳಿದಿರಿ. ನಿಮಗೆ ಕೋಪ ಬಂತು. ಹಾಗೇ ನನ್ನ ಆಸೆಗಳಿಗೂ ನೀವೇಕೆ ಸ್ಪಂದಿಸಬಾರದು?''

ಸಂಧ್ಯಾ , ಇದು ತಿಯಾಯ್ತು.

''ಇದು ಸರಿಯಲ್ಲ, ಇದು ನಿಯಮಬಾಹಿರ ಎಂದೆಲ್ಲಾ ಉಪದೇಶ ಮಾಡಬೇಡಿ. ಇದೇ ಮಾತುಗಳನ್ನು ನಿಮಗೆ ಪದೇ ಪದೇ ಹೇಳಲು ಸುತಾರಾಂ ಇಷ್ಟವಿಲ್ಲ'' ಮತ್ತೆ ಅವನ ಸನಿಹಕ್ಕೆ ಬಂದಳು.

''ದಯವಿಟ್ಟು ಇಲ್ಲಿಂದ ಹೊರಟು ಹೋಗಿ'' ಕೈಮುಗಿದ.

''ಹಾಗಾದ್ರೆ ನಿಮ್ಮನ್ನ ಹೇಡಿ ಅಂತ ಭಾವಿಸ್ತೀನಿ.''

''ಏನಾದ್ರೂ ಅಂದ್ಕೊಳ್ಳಿ. ಮೊದಲು ಇಲ್ಲಿಂದ ಹೊರಟು ಹೋಗಿ''

'' ಆಯ್ತು ಹೋಗ್ತೀನಿ. ಸೀದಾ ಇಲ್ಲಿಂದ ಎಲ್ಲಿಗಾದರೂ ಹೋಗ್ತೀನಿ. ನೀವಲ್ಲದಿದ್ದರೆ ಇನ್ನೊಬ್ಬ, ನಾನಾಗಿಯೇ ಹೋಗಿ ನನ್ನ ಆಸೆಯನ್ನು ತಿಳಿಸಿದರೆ, ಯಾವ ಗಂಡಸೂ ಇಲ್ಲವೆನ್ನುವುದಿಲ್ಲ. ನಾನು ನನ್ನ ಇಚ್ಛೆಯನ್ನು ನಿಮ್ಮಿಂದ ಅಲ್ಲದಿದ್ದರೂ ಇನ್ನೊಬ್ಬನಿಂದ ಪೂರೈಸಿಕೊಳ್ತೀನಿ. '' ಹಠವಾದಿಯಂತೆ ಆಡಿದಳು.

''ಖಂಡಿತಾ ನಿಮ್ಮ ತಲೆ ಕೆಟ್ಟಿದೆ.'' ತಲೆಯನ್ನು ಮೆಲುವಾಗಿ ಚಚ್ಚಿಕೊಂಡ.

''ಇನ್ನು ಇಲ್ಲೇ ಇದ್ದರೆ ತಲೆ ಕೆಡಬಹುದು. ನಾನು ಏನೋ ಒಂದು ಉನ್ನತವಾದ ಆಸೆಯಿಂದ ನಿಮ್ಮನ್ನೇ ಆಶಿಸಿದೆ. ಏಕೆ ಗೊತ್ತಾ! ನಿಮ್ಮಂತಹ, ಉದಾರ ಸ್ವಭಾವದ, ಒಳ್ಳೆಯ ಗುಣ ನಡತೆಯ ಮಗು ನನಗೆ ಹುಟ್ಟಲಿ ಅಂತ. ನಾನು ಇಚ್ಛೆಯಿಂದ ನಿಮ್ಮನ್ನು ವರಿಸಿ, ನಿಮ್ಮಿಂದ ಪಡೆಯುವ ಮಗು ನನಗೆ ದೇವರ ಸಮಾನವಾಗುತ್ತಿತ್ತು. ಆದರೆ ಈಗ ? ಹೇಗೆ

ಆದರೂ ಸರಿ, ನನಗೆ ಒಂದು ಮಗು ಹುಟ್ಟಿದರೆ, ಅಥವಾ ಹುಟ್ಟದಿದ್ದರೆ, ಅಥವಾ ನನಗೇನಾದರೂ ಹೆಚ್ಚು ಕಡಿಮೆ ಆದರೆ, ನನಗೆ ಹುಚ್ಚುಹಿಡಿದರೆ ಅದಕ್ಕೆ ನೀವೇ ಕಾರಣರಾಗ್ತೀರಿ. ನೀವೇ.... ನೀವೇ. ಅವಳು ಆವೇಶ ಬಂದವಳಂತೆ ನುಡಿದಾಗ, ಅವನು ನಖಶಿಖಾಂತ ಕೋಪದಿಂದ ನಡುಗಿದ. ಎದುರಿಗೆ ನಿಂತಿದ್ದವಳ ಕೆನ್ನೆಗೆ ಒಂದೇಟನ್ನು ಫಟೀರನೇ ಬಾರಿಸಿದ.''

ಅನಿರೀಕ್ಷಿತವಾದ ಹೊಡೆತಕ್ಕೆ ತತ್ತರಿಸಿ ಅವಳು ಕೆಳಗೆ ಉರುಳಿದಳು. ಎಚ್ಚರ ತಪ್ಪಿದವಳಂತೆ ಬಿದ್ದಿದ್ದ ಅವಳ ಮುಖಕ್ಕೆ ತಣ್ಣೀರನ್ನು ಚಿಮುಕಿಸಿದ. ಕಣ್ಣು ಬಿಟ್ಟು ಅವಳು ಮುಖವನ್ನು ಕೈಯಿಂದ ಮುಚ್ಚಿಕೊಂಡು ಅಳತೊಡಗಿದಳು.

ಅವನು ಗೊಂದಲಕ್ಕೆ ಸಿಕ್ಕಿ ಬಿದ್ದವನಂತೆ ವಿಲಿವಿಲನೆ ಒದ್ದಾಡಿದ.

''ಕ್ಷಮಿಸಿ ನಾನು ಹೊಡೆಯಬಾರದಾಗಿತ್ತು'' ಎಂದ.

ಅವಳು ಎದ್ದು ಕುಳಿತು ಕೆನ್ನೆಯನ್ನು ಉಜ್ಜಿಕೊಂಡಳು. 'ನಿಮಗೆ ಕ್ಷಮೆ ಇಲ್ಲ' ಎಂದಳು. ಅವನು ಎದ್ದು ಇನ್ನೊಂದು ದಿಕ್ಕಿಗೆ ತಿರುಗಿ ನಿಂತ. ಅವಳೂ ಎದ್ದು ನಿಂತು ಹೊರಡಲನುವಾದಳು.

ಅವಳು ಚಪ್ಪಲಿ ಮೆಟ್ಟಿ ಬಾಗಿಲಿನಿಂದಾಚೆ ಇನ್ನೇನು ಹೊರಟು ಬಿಟ್ಟಳು ಎನ್ನುವಾಗ ಅವನು ಅವಳ ಹಿಂದೆ ಬಂದು ನಿಂತ. ''ನನ್ನನ್ನು ಕ್ಷಮಿಸದೇ ಹೊರಟು ಬಿಡ್ತೀರಾ ?'' ಕೇಳಿದ. ಅವಳು ಉತ್ತರಿಸದೇ ಮುಂದೆ ಮುಂದೆ ನಡೆದಾಗ ಅವನು ಹಿಂದಿನಿಂದ ಬಂದು ಅವಳ ಕೈ ಹಿಡಿದು ನಿಲ್ಲಿಸಿದ. ಅವಳು ಅವನ ಕಡೆ ನೋಡಿ, ಒಳಕ್ಕೆ ಬಂದಳು.

''ಬಹುಶಃ ನಮ್ಮ ನಿಮ್ಮ ಭೇಟಿ ಇದೇ ಕಡೆಯದಾಗಬಹುದು. ಆದರೆ, ನನ್ನನ್ನು ಕ್ಷಮಿಸದೇ ನೀವು ಇಲ್ಲಿಂದ ಹೋಗುವಂತಿಲ್ಲ'' ಅವನನ್ನೇ ನೋಡಿ, ಮತ್ತೆ ಮುಂದಕ್ಕೆ ಹೆಜ್ಜೆ ಇಟ್ಟಳು.

''ನನ್ನ ಮನೆಗೆ ಅತಿಥಿಯಾಗಿ ಬಂದ ಒಬ್ಬ ಸ್ತ್ರೀಗೆ ಅಪಮಾನ ಮಾಡಿದ ಪಾಪ ನನ್ನನ್ನು ಸದಾ ಕಾಣುತ್ತೆ. ಪ್ಲೀಸ್ ಕ್ಷಮಿಸಿದೀನಿ ಅಂತ ಹೇಳಿ ಬಿಟ್ಟು ಹೋಗಿ. ಅಥವಾ ನಿಮಗೆ ಸಿಟ್ಟು ಇದ್ದರೆ ನನ್ನ ಕೆನ್ನೆಗೂ ಹೊಡೆದುಬಿಡಿ. ಹಾಗೇ ಮಾತ್ರ ಹೋಗಬೇಡಿ....''

''ನೀವು ನನ್ನ ಕೆನ್ನೆಗೆ ಹೊಡೆದು ಅವಮಾನಗೊಳಿಸಿದ್ದನ್ನು , ನಾನು ನಿಮ್ಮ ಕೆನ್ನಗೆ ಹೊಡೆದು ತೀರಿಸಿಕೊಳ್ಳಬಲ್ಲೆ, ಆದರೆ ನೀವು ಅದಕ್ಕಿಂತ ಹೆಚ್ಚಿನ ಅವಮಾನ ನನಗೆ ಮಾಡಿದೀರಿ. ಮನಸ್ಸಿಗೆ ಘಾಸಿ ಆಗಿದೆ. ಅದಕ್ಕೆ ಕ್ಷಮೆ ಇಲ್ಲ. ''

''ಇನ್ನೇನು ಮಾಡಿದೆ ? ನಾನು? '' ಪೆದ್ದನಂತೆ ಕೇಳಿದ.

''ನಾನಾಗಿಯೇ ನಿಮ್ಮ ಬಳಿಗೆ ಬಂದೆ. ನನ್ನನ್ನು ನಿರಾಕರಿಸಿದೀರಿ. ಅದಕ್ಕಿಂತ ಬೇರೆ ಅವಮಾನ ಏನಿದೆ ?''

''ಅದೂ.... ಅದು ನಿಮ್ಮ ಒಳ್ಳೆಯದಕ್ಕೇ....'' ಎಂದ ಬಿಗುವಾಗಿ.

"ನನ್ನ ಒಳ್ಳೆಯದು, ಕೆಟ್ಟದ್ದು ಯಾವುದು ಎಂದು ನಾನು ಇವತ್ತು ತೀರ್ಮಾನಿಸಿಕೊಂಡೇ ಬಂದಿದ್ದೆ. ನೀವು ಈ ರೀತಿ ಹೇಡಿ ಎಂದು ನಾನು ಭಾವಿಸಿರಲಿಲ್ಲ."

"ನಿಮ್ಮ ಪತಿಗೆ ಈ ವಿಷಯ ತಿಳಿದಿದೆಯೆ ?"

"ನನ್ನ ಪತಿಗೆ ತಿಳಿಸುವ ವಿಷಯವೆ ಇದು ನಿಮ್ಮ ಪತ್ನಿ ನಿಮಗೆ ಎಲ್ಲಾ ವಿಷಯಗಳನ್ನು ತಿಳಿಸಿ, ನಿಮ್ಮನ್ನು ಬಿಟ್ಟು ಹೋದರೆ ?"

"ಸಂಧ್ಯಾ ! ನನ್ನ ಪತ್ನಿಯ ಮಾತು ಈಗೇಕೆ ? ಅವಳು ಮಾಡಿದ್ದು ಸರಿಯಲ್ಲ ಎಂದು ತಿಳಿದಿದ್ದರಿಂದಲೇ ನಾನು ನಿಮಗೂ ತಿಳುವಳಿಕೆ ಹೇಳಲು ನೋಡಿದೆ. ಆದರೆ ನಿಮಗೆ ಅದು ಬೇಕಿಲ್ಲ..."

"ಯಾರ ತಿಳುವಳಿಕೆಯ ಮಾತೂ ನನ್ನನ್ನೂ ಬದಲಾಯಿಸಲು ಸಾಧ್ಯವಿಲ್ಲ. ನಾನು ಒಂದು ತೀರ್ಮಾನಕ್ಕೆ ಬಂದ ಮೇಲೆ ಆಯ್ತು. ನಾನು ನಿಮ್ಮ ಗುಣ ನಡತೆಗೆ ಮೆಚ್ಚಿ ನಿಮ್ಮನ್ನು ಗೌರವಿಸಿದೆ. ಆದ್ದರಿಂದಲೇ ನಿಮ್ಮನ್ನೇ ಆರಿಸಿಕೊಂಡೆ. ನಾನೇ ಬಾಯಿಬಿಟ್ಟು ನನ್ನ ಆಸೆಯನ್ನು ತಿಳಿಸಿದರೂ, ನೀವು ... ಒಪ್ಪಲಿಲ್ಲ. ಇದು ಹೇಡಿಗ ಲಕ್ಷಣ."

"ನನ್ನನ್ನು ಹೊಗಳುವುದರ ಜತೆಗೆ ಹೀಯಾಳಿಸುತ್ತಲೂ ಇದೀರಿ. ನನಗೀಗ ಏನೂ ತೋಚುತ್ತಿಲ್ಲ. ನನಗೆ ಯೋಚಿಸಲು ಸಮಯಬೇಕು."

"ಇದರಲ್ಲಿ ಯೋಚಿಸುವುದೇನಿದೆ ? " ಕಿಸಕ್ಕನೆ ನಕ್ಕಳು.

"ನೀವು ಅಸಾಮಾನ್ಯ ಹೆಣ್ಣು ಅಪ್ಪಾ" ಎಂದ.

"ದಿಟ್ಟ ಹೆಣ್ಣು ಭಂಡ ಹೆಣ್ಣು ಅಂತ ಏನು ಬೇಕಾದ್ರೂ ಅಂದ್ಕೊಳ್ಳಿ. ಪರವಾಗಿಲ್ಲ... ನಾನು ಯಾವುದಕ್ಕೂ ತಲೆ ಕೆಡಿಸಿಕೊಳ್ಳುವುದಿಲ್ಲ."

"ನಿಧಾನವಾಗಿ ಯೋಚಿಸಿ ದುಡುಕಬೇಡಿ" ಮತ್ತೊಮ್ಮೆ ಹೇಳಿದ.

"ಇನ್ನೂ ನಿಧಾನಿಸಲು ಸಮಯವೆಲ್ಲಿದೆ ! ಒಂದು ವೇಳೆ ಈ ಸಮಯ ನನಗೆ ಮತ್ತೆ ಒದಗದಿದ್ದರೆ ? ನಿಮಗೂ ಸಿಗದಿದ್ದರೆ ?"

"ಪ್ರಪಂಚವೇನೂ ಮುಳುಗಿ ಹೋಗುವುದಿಲ್ಲ" ಎಂದುಹೇಳಬೇಕೆಂದುಕೊಂಡವನು ಏಕೋ ಏನೋ ಸುಮ್ಮನಾದ. ಅವನು ಸುಮ್ಮನಾದುದನ್ನು ಕಂಡು ಅವಳು ಸಮ್ಮತಿ ಎಂದು ಭಾವಿಸಿದಳು. ಅವನ ಬಳಿಯಲ್ಲಿ ಬಂದು ನಿಂತು ಅವನ ಕೈ ಹಿಡಿದು ತನ್ನ ಕೆನ್ನೆಗೆ ಒತ್ತಿಕೊಂಡಳು. "ನೀವು ಕೊಟ್ಟ ಏಟಿನಿಂದ ನನ್ನ ಕೆನ್ನೆ ಇನ್ನೂ ಉರಿಯುತ್ತಿದೆ" ಎಂದಳು.

ಅವನು ಪೆದ್ದನಂತೆ ಅವಳನ್ನೇ ದಿಟ್ಟಿಸಿದ. ಅವಳು ನಿಧಾನವಾಗಿ ಅವನಿಗೆ ಒರಗಿಕೊಂಡಳು. ಅವನ ಕೈಗಳು ಅವನನ್ನು ಬಳಸಿದವು. ಮೈ ಬಿಸಿಯಾಯಿತು.

"ಎಷ್ಟು ಸತಾಯಿಸ್ತೀರಿ ನೀವು " ಎಂದು ಅವಳು ನುಡಿದಾಗ ಅವನು ಬಂಧನವನ್ನು

ಬಿಗಿಗೊಳಿಸಿದ. ಹಾಗೆಯೇ ಅವಳನ್ನು ತನ್ನ ರೂಮಿಗೆ ಕರೆದೊಯ್ದ. ಯಾವ ಆತುರ ಕಾತುರವನ್ನು ತೋರಗೊಡದೇ ಸಹಜವಾಗಿ, ಪ್ರೀತಿಯಿಂದ ಕೂಡಿದ ಅವನ ಸಹಕಾರಕ್ಕೆ ಅವಳು ಬೆರಗಾದಳು. ಅವನಿಗೆ ತನ್ನನ್ನು ಸಮರ್ಪಿಸಿಕೊಂಡಳು. ಅವನ ಅಂತರ್ಯದಲ್ಲಿ ಏನು ಅಡಗಿದೆ ಎಂದು ಯೋಚಿಸಲೂ ಸಮಯವಿರಲಿಲ್ಲ. ಹೆಂಗಸಿನ ಬಗ್ಗೆ ಆಸಕ್ತಿಯನ್ನು ಕಳೆದುಕೊಂಡವನಂತೆ ಅನ್ನಿಸಲಿಲ್ಲ. ಎಲ್ಲಾ ಬೂಟಾಟಿಕೆ, ಹೆಂಡತಿ ಇಲ್ಲದ ಮೇಲೆ ತಾನು ಬ್ರಹ್ಮಚಾರಿಯಂತೆ ಅಷ್ಟೇ ಇದೀನಿ ಅಂತ ಅಂದನಲ್ಲ. ಇಂತಹವನಿಂದ ಬ್ರಹ್ಮಚರ್ಯ ಸಾಧ್ಯವೇ ? ಎಂದುಕೊಂಡಳು.

ಅವಳು ಸಂತೃಪ್ತಿಗೊಂಡಳು ಎಂಬ ಅನುಭವ ಅವನಿಗೆ ಉಂಟಾದ ನಂತರ ಹೇಳಿದ... "ನಿಮ್ಮ ಮಾತಿಗೆ ಒಪ್ಪಿ ಅಪಚಾರ ಮಾಡಿಬಿಟ್ಟೆ. ಸಾರೀ ದಯವಿಟ್ಟು ಹೊರಟು ಹೋಗಿ. ಇನ್ನು ನಿಮ್ಮ ಸ್ನೇಹ ನನಗೆ ಬೇಕಿಲ್ಲ. "ಅವನು ಹಾಗೆ ಹೇಳುವನೆಂದು ಅವಳು ಊಹಿಸಿರಲಿಲ್ಲ. ಅವಳ ಮುಖ ಕೆಂಪಾಯಿತು. ಕೋಪದಿಂದ ನುಡಿದಳು."

"ಅಪಚಾರ, ಅಪರಾಧ, ಉಪಕಾರ ಇಂತಹ ಮಾತು ಬಿಟ್ಟು ಬೇರೆ ಮಾತುಗಳೇ ಬರುವುದಿಲ್ಲವೇ ನಿಮಗೆ ? ನಿಮ್ಮಿಂದ ನನಗೆ ತೃಪ್ತಿ ಸಿಕ್ಕಿರುವುದೇನೋ ನಿಜ. ಆದರೆ ನಿಮಗೂ ಏನೋ ಸಂತಪ್ತಿ, ಆನಂದ ದೊರಕಿರಬೇಕು ಅಲ್ಲವೆ ? ನಿಮಗೆ ನೀವು ವಂಚನೆ ಮಾಡಿಕೊಳ್ಳದಿರಿ. ನಿಜ ಹೇಳಿ. ಇಷ್ಟು ವರ್ಷಗಳು ಏಕಾಂಗಿಯಾಗಿ ಕಾಲ ಕಳೆದಿದ್ದು ವ್ಯರ್ಥ, ಸರಿಯಲ್ಲ ಎಂದು ಅನ್ನಿಸುತ್ತಿಲ್ಲವೇ ?"

"ಇಲ್ಲ" ಎಂದ ಕಟುವಾಗಿ. ಅವಳ ಕಡೆ ನೋಡದೆ.

"ಸುಳ್ಳು ನಿಮ್ಮ ಮಾತನ್ನು ನಂಬುವುದಿಲ್ಲ. ನನ್ನಂತೆಯೇ ನಿಮಗೂ ತೃಪ್ತಿ ಸಿಕ್ಕಿದೆ ಎಂಬ ಅನುಭವ ನನಗೂ ಉಂಟಾಯಿತು" ಎಂದಳು.

"ಥೂ ಲಜ್ಜೆಗೆಟ್ಟ ಹೆಣ್ಣು" ಎಂದು ಗೊಣಗಿದ. ಅವಳಿಗೆ ಕೇಳಿಸಿತ್ತು.

"ನಾನು ಲಜ್ಜೆಗೆಟ್ಟ ಹೆಣ್ಣಾಗಿದ್ದರಿಂದಲೇ ನಿಮಗೆ ಈ ದಿನ ಈ ಸುಖ ಸಿಗಲು ಸಾಧ್ಯವಾಯಿತು. ಇಲ್ಲದಿದ್ದರೆ ಯಾವ ಹಠಕ್ಕಾಗಿ ಹೀಗೆ ಇದೀರೋ.... ನಂಗಂತೂ ಅರ್ಥವಾಗ್ತಿಲ್ಲ" ಎಂದಳು ಜರಿಯುವಂತೆ.

"ನೀವಿನ್ನು ಹೋಗಬಹುದು" ಭಾವರಹಿತವಾಗಿ ಅವನು ಹೇಳಿದಾಗ, ಅವಳಿಗೆ ಜಿಗುಪ್ಸೆ ಎನಿಸಿತು. ಅವನು ಹೊಗಳಿ ತನ್ನ ಅನುಭವಗಳನ್ನು ಹಂಚಿಕೊಳ್ಳುವನೆಂದು ನಿರೀಕ್ಷಿಸಿದ್ದಳು. ಅವಳಸಹನೆ ಮೀರಿತ್ತು. "ನೀವು ಹೇಡಿ" ಎಂದು ಅವನ ಕೆನ್ನೆಗೆ ಹೊಡೆದಳು. "ನಿಮ್ಮಂತಹವರು ಯಾವ ಹೆಂಗಸನ್ನು ಪ್ರೀತಿಸಲು ಸಾಧ್ಯವಿಲ್ಲ. ಹೀಗೆ ಒಂಟಿಯಾಗಿರುವುದಕ್ಕಷ್ಟೆ ಲಾಯಖ್ಖು..... ನನಗೆ ಸಿಕ್ಕ ಸುಖವನ್ನೆಲ್ಲಾ ಒಂದು ಗಳಿಗೆಯಲ್ಲಿ ಹಾಳು ಮಾಡಿಬಿಟ್ಟಿರಿ. ಇನ್ನು ಈ ಮನೆಗೆ ನಾನು ಮತ್ತೆ ಬರುವುದಿಲ್ಲ' ಎಂದು ಹೇಳಿ ಉಡುಪನ್ನು ಸರಿಮಾಡಿಕೊಂಡು ಹೊರಟಳು. ಅವಳಿಗೆ ಅಳು ಬರುವಂತಾಗಿತ್ತು. ಆದರೂ

ಅವನು ತಡೆಯಲಿಲ್ಲ. ಗುಂಡು ಕಲ್ಲಿನಂತೆ ನಿಂತಿದ್ದವನನ್ನು ಹಿಡಿದು ಜಜ್ಜಬೇಕು ಅಂತ ಎನಿಸಿತ್ತು. ಗೇಟನ್ನು ದಾಟಿ ಅವಳು ಹೊರಟು ಹೋದಳು. ಅವನು ಹಾಗೆಯೇ ನಿಂತಿದ್ದ.

* * * *

ಇದೆಲ್ಲ ನಡೆದು ಎಷ್ಟೋ ದಿನಗಳು ಕಳೆದು ಹೋದವು. ದಿನೇಶನಿಗೆ ಆದಿನವನ್ನು, ಅವಳ ಮಾತುಗಳನ್ನು ಮರೆಯಲು ಸಾಧ್ಯವಾಗಲಿಲ್ಲ. ನನಗೇ ಹೀಗೆ ಅನ್ನಿಸಬೇಕಾದರೆ, ಅವಳು ಹೇಗಿದ್ದಾಳೋ ಎಂದು ಅವಳ ಬಗ್ಗೆ ಚಿಂತಿಸುತ್ತಿದ್ದ. ಅವಳು ಮತ್ತೆ ಇನ್ನೆಂದೂ ಬರುವುದಿಲ್ಲ ಅಂತ ಎನಿಸಿದಾಗ, ಅನಿರೀಕ್ಷಿತವಾಗಿ ಅವಳ ಸ್ನೇಹವನ್ನು ಕಳೆದುಕೊಂಡುದರ ಬಗ್ಗೆ ವ್ಯಥೆ ಪಡುತ್ತಿದ್ದ ಅವಳು ತನ್ನಿಂದ ಈ ಸಂಬಂಧವನ್ನು ಬಯಸದೇ ಇದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದೇ ಬಾರಿಬಾರಿಗೂ ಅನ್ನಿಸುತ್ತಿತ್ತು.

ಅವಳು ಆಡಿದ ಮಾತುಗಳನ್ನೆಲ್ಲ ಮೆಲುಕು ಹಾಕಿದಾಗ, ತನ್ನನ್ನೇ ವಿಶ್ಲೇಷಿಸಿಕೊಳ್ಳುತ್ತಿದ್ದ. ತನ್ನಲ್ಲಿ ಏನಾದರೂ ದೋಷವಿದೆಯೆ ! ಇದೇ ಕಾರಣದಿಂದ ಅಲಕಾ ತನ್ನನ್ನು ಬಿಟ್ಟು ಹೋದಳೆ? ಹಾಗಾದರೆ ತನ್ನ ಮಗಳು ! ನನ್ನ ಮಗಳೇ ತಾನೇ ಎಂಬ ಅನುಮಾನ ಬಂದಾಗ, ಮೈ ಚಳಿ ಬಂದವನಂತೆ ನಡುಗುತ್ತಿದ್ದ. ಮತ್ತೆ ಈ ವಿಷಯದಲ್ಲಿಯೂ ತನಗೆ ಮೋಸವಾಗಬಾರದು. ಅವಳು ನನ್ನ ಮಗಳೇ. ನನ್ನ ಮಗಳೇ ಎಂದು ತನಗೆ ತಾನೇ ಸಮಾಧಾನ ಹೇಳಿಕೊಳ್ಳುತ್ತಿದ್ದ. ಆದರೂ ಮತ್ತೆ ಮತ್ತೆ ಯಾವುದೋ ಅರ್ಥವಾಗದ ಆತಂಕವೂ ಆಗುತ್ತಿತ್ತು.

ಹಾಗಿದ್ದರೆ ಈಗ ತನ್ನಿಂದ ಖಂಡಿತಾ ಒಂದು ಮಗುವಂತೂ ಆಗಲೇಬೇಕು.... ಆಗ ತನ್ನಲ್ಲಿ ಏನೂ ದೋಷವಿಲ್ಲವೆಂದು ಅರ್ಥವಾಗುತ್ತೆ ಎಂದುಕೊಂಡು, ಅವಳು ಮತ್ತೊಮ್ಮೆ ಬರಬಾರದೇ ಎಂದು ಪರಿತಪಿಸತೊಡಗಿದ. ತನ್ನ ಸ್ವಾರ್ಥತೆಗೆ ಅಸಹ್ಯವೆನಿಸಿದರೂ, ಅನುಮಾನ ಬಗೆಹರಿಯಲೇಬೇಕಾಗಿತ್ತು. ಈ ವಿಷಯವನ್ನು ಯಾರೊಡನೆಯೂ ಚರ್ಚಿಸಲಾರ. ಡಾಕ್ಟರ ಬಳಿಗೆ ಹೋದರೆ... ಎಂದು ಒಂದು ಗಳಿಗೆ ಅನ್ನಿಸಿದರೂ, ತಾನು ಅವರೊಡನೆ ಏನು ಹೇಳಬಲ್ಲೆ ? ನನ್ನ ಹೆಂಡತಿ ತನ್ನ ಜತೆಗಿಲ್ಲ, ತನ್ನಗಿನ್ಯಾವ ಹೆಂಗಸಿನ ಸಹವಾಸವೂ ಇಲ್ಲ... ಎಂದು ಹೇಗೆ ಹೇಳಿಯಾನು ? ಆದರೆ ಒಂದು ವೇಳೆ ತನ್ನ ಈ ಅನುಮಾನ ಹೆಚ್ಚುತ್ತಾ ಹೋದರೆ, ತಾನು ಎಂದಾದರೂ ತನ್ನ ಎಸ್ಟೇಟಿನ ಹೆಣ್ಣಾಳಿನ ಮೇಲೆ ಬಲಾತ್ಕಾರ ಮಾಡಿದರೆ, ಆಶ್ಚರ್ಯವೇನಿಲ್ಲ... ತನ್ನ ಅನಿಸಿಕೆಗೆ ತನಗೇ ಅಸಹ್ಯವೆನಿಸಿತು.

ನನ್ನ ಪಾಡಿಗೆ ನಾನು ಇದ್ದವನು, ನನ್ನನ್ನು ಇಂತಹ ಪರಿಸ್ಥಿತಿಗೆ ಸಿಕ್ಕಿಸಿದಳಲ್ಲ. ಹೀಗೆ ಅಂತ ಗೊತ್ತಿದ್ದರೆ, ಅಸಹಾಯಕ ಪರಿಸ್ಥಿತಿಯಲ್ಲಿ ನಿಂತಿದ್ದವಳನ್ನು ತಾನು ನೋಡುತ್ತಲೂ ಇರಲಿಲ್ಲ. ತನ್ನ ಕಣ್ಣಿಗೇಕೆ ಬಿದ್ದಳೋ... ಈ ಮಾಯಾಂಗನೆ !

ಹೀಗೆ ದಿನಗಳು ಕಳೆದಂತೆ ಅವನ ಉದ್ವೇಗವೂ ಹೆಚ್ಚಾಯಿತು. ತಡೆಯಲಾಗದೇ ಒಂದುದಿನ ಜೆ.ಪಿ. ನಗರಕ್ಕೆ ಹೊರಟ. ಕಾರಿನಲ್ಲಿ ಕುಳಿತೇ ಆ ರಸ್ತೆಯಲ್ಲಿ ತಿರುಗಾಡಿದರೂ, ಅದರಲ್ಲಿ ಅವಳ ಮನೆ ಯಾವುದೆಂದು ಅವನಿಗೆ ತಿಳಿಯಲಿಲ್ಲ. ಅವಳ ಗಂಡನ ಹೆಸರೂ ತಿಳಿಯದು. ಸಂಧ್ಯಾಳ ಹೆಸರನ್ನು ಕೇಳುತ್ತಾ ಮನೆ ಮನೆ ಹುಡುಕುವುದು ಚೆನ್ನಲ್ಲ ಅಂತ ಎನ್ನಿಸಿತು. ಇದ್ದಕ್ಕಿದ್ದಂತೆ ಅವಳು ಆ ಆಶ್ರಮಕ್ಕೆ ಹೋಗಿರಬಹುದೇನೋ ಎನಿಸಿದಾಗ ಅವನ ಎದೆ ಬಡಿತ ಹೆಚ್ಚಾಯಿತು. ಸೀದಾ ಆಶ್ರಮದ ಕಡೆಗೆ ಕಾರನ್ನು ಓಡಿಸಿದ.

ಆದರೆ ಅಲ್ಲಿ ಯಾವ ಜನ ಸಂಚಾರವೇ ಇಲ್ಲದ್ದನ್ನು ಗಮನಿಸಿ ಅವನು ನೆಮ್ಮದಿಗೊಂಡ. ದಿನಗಳು ಕಳೆದರೂ ಅವಳ ಬಗ್ಗೆ ತಳಮಳ ಹೆಚ್ಚಾದಂತೆ, ಅವಳನ್ನು ಹುಡುಕುವುದು ಎಲ್ಲಿ ಎಂದು ತಿಳಿಯದೇ ಇದ್ದಾಗ ಎಲ್ಲಾ ಮರೆತು ಬಿಡುವವನಂತೆ, ಸೀದಾ ಅಣ್ಣನ ಮನೆಗೆ ಬಂದ.

ಮಗಳನ್ನು ಪರೀಕ್ಷಕನಂತೆ ಬಾರಿ ಬಾರಿಗೂ ನೋಡಿದಾಗ, ಗೀತಾ ಆತಂಕದಿಂದ ಪ್ರಶ್ನಿಸಿದಳು.

''ಏನಾಯ್ತು ದಿನೇಶ ?... ಏನೋ ಅನುಮಾನ ಕಾಡ್ತಿದೆ ಅಂತ ಕಾಣುತ್ತೆ ? ಅಲ್ವಾ? ನಾನು ಸರಿಯಾಗಿ ಸಾಕುತ್ತಿಲ್ಲ ಅಂತ ಏನಾದ್ರೂ ಅನ್ನಿಸ್ತಿದೆಯೇ ನಿನಗೆ ?''

ಅವನು ಪೆಚ್ಚಾದ. ''ಛೆ, ಛೆ, ಹಾಗೇನಿಲ್ಲ'' ಎಂದ. ಅವನ ತಪ್ಪಿನ ಅರಿವಾಗಿತ್ತು. ನಿಜವನ್ನು ಅವಳೊಡನೆ ಹೇಗೆ ಹೇಳಿಯಾನು ?

''ನಿನ್ನ ಅಣ್ಣನ ಎದುರಿಗೆ ಹೀಗೆ ವರ್ತಿಸಬೇಡ. ಅವರು ನೊಂದ್ಕೋತಾರೆ.''

''ಅತ್ತಿಗೆ, ಇಷ್ಟು ಮುದ್ದಾದ ಮಗುವನ್ನು ಇವಳ ಅಮ್ಮ ಹೇಗೆ ಬಿಟ್ಟುಹೋದಳು ಅಂತ ದುಃಖವಾಗ್ತಿದೆ ನನಗೆ'' ಅವನ ದುಗುಡ ಅವಳಿಗೆ ಅರ್ಥವಾಗಿತ್ತು.

''ನಾನು ಎಲ್ಲಿ ಹೋಗಿದೀನಿ ? ಇಲ್ಲಿಯೇ ಇದೀನಲ್ಲ.'' ಎಂದು ನುಡಿದಾಗ ಮತ್ತಷ್ಟು ಪೆಚ್ಚಾದ. ಅವಳ ತಮಾಷೆಯ ಮಾತಿಗೆ ಸಣ್ಣದಾಗಿ ನಗುವನ್ನು ತಂದುಕೊಂಡ.

''ಏಕೋ ನಿನ್ನ ಮನಸ್ಸು ಸರಿಯಾಗಿಲ್ಲ. ನೀನು ಆದಷ್ಟು ಬೇಗ ಮತ್ತೆ ಮದುವೆ ಆದರೆ ಒಳ್ಳೆಯದು ಅಂತ ಅನ್ನಿಸುತ್ತೆ ನನಗೆ.''

''ಮದುವೆಯ ಆಸೆಯೇ ನನಗಿಲ್ಲ ಬಿಡಿ'' ಕಣ್ಣು ತಪ್ಪಿಸಿ ನುಡಿದ.

''ಒಬ್ಬನೇ ಇರ್ತೀಯ. ಏನೇನೋ ಆತಂಕಗಳು ಕಾಡುತ್ತವೆ. ಎಲ್ಲಾ ಬಿಟ್ಟು ಇಲ್ಲೇ ಬಂದು ಇರುವುದಾದರೆ ಇರು. ನಮಗೆ ಏನೂ ತೊಂದರೆ ಇಲ್ಲ.''

ಅವಳ ಅಂತಃಕರಣವನ್ನು ಮೆಚ್ಚಿದ. ''ನನಗೆ ನಿಮ್ಮನ್ನುಬಿಟ್ಟರೆ ಬೇರೆ ಇನ್ಯಾರಿದ್ದಾರೆ ..... ಆಗಾಗ್ಗೆ ಬರ್ತಾನೆ ಇರ್ತೀನಲ್ಲ. ಎಲ್ಲವನ್ನೂ ನಿಮಗೆ ಹೇಳ್ತೀನಲ್ಲ''

"ಹಾಗಾದರೆ ಹೇಳು, ನಿನ್ನ ಮನಸ್ಸನ್ನು ಏನೋ ಕೊರೆಯುತ್ತಿದೆ ಅಂತ ನನಗನ್ನಿಸುತ್ತಿದೆ" ಒತ್ತಾಯಿಸಿದಳು. ಬಲವಂತವಾಗಿ ಅವನನ್ನು ತನ್ನೆದುರಿನಲ್ಲಿ ಕೂರಿಸಿಕೊಂಡಳು.

"ಒಂದು ಘಟನೆ ನಡೆದುಹೋಯಿತು ಅತ್ತಿಗೆ. ಆದರೆ ಅದರಲ್ಲಿ ನನ್ನ ತಪ್ಪು ಏನೂ ಇಲ್ಲ. ಆದರೂ ಅಪರಾಧಿಭಾವ ನನ್ನನ್ನು ಕಾಡುತ್ತಿದೆ."

"ನನಗೆ ಗೊತ್ತು. ನೀನು ತಪ್ಪು ಮಾಡುವವನಲ್ಲ. ಏನು ನಡೀತು ಅಂತ ಹೇಳು. ನನ್ನಿಂದ ಏನಾದರೂ ಸಹಾಯವಾಗುವುದಾದರೆ ಖಂಡಿತಾ ಮಾಡ್ತೀನಿ."

ಅತ್ತಿಗೆಯ ಕಡೆ ನೋಡುವ ಧೈರ್ಯವಿಲ್ಲದೇ, ತಲೆತಗ್ಗಿಸಿ, ದಿನೇಶ ನಡೆದ ವಿಷಯಗಳನ್ನೆಲ್ಲ ತಿಳಿಸಿದ. ಅವಳೂ ಗೊಂದಲಕ್ಕೊಳಗಾದಳು. ಆದರೂ ಹೇಳಿದಳು. ಅವಳ ಧ್ವನಿ ಬಿಗಿಯಾಗಿತ್ತು.

"ಏನೇ ಆಗಲಿ, ಆ ಹೆಂಗಸು ಮಾಡಿದ್ದು ತಪ್ಪು. ಗಂಡನಿಗೆ ತಿಳಿಯದಂತೆ ಅವಳು ಹಾಗೆ ವರ್ತಿಸಬಾರದಿತ್ತು. ಅವಳೂ ನಿನ್ನಂತೆಯೇ ಪರಿತಪಿಸುತ್ತಿರಬಹುದು. ಮತ್ತೆ ಅವಳಾಗಿಯೇ ನಿನ್ನ ಬಳಿಗೆ ಬರಬಹುದು. ಆಗ ಮಾತ್ರ ಹೀಗೆ ನಡೆಯಬಾರದು." ಸಂಯಮ ಮೀರಬಾರದು.

"ಬರಲಾರಳು. ಬರುವುದಿಲ್ಲವೆಂದು ಹೇಳಿ ಹೊರಟು ಹೋದಳು." ವ್ಯಸನ ಗೊಂಡಿದ್ದ.

"ಹೋದರೆ ಹೋದಳು ನಿನಗೆ ಬೇರೆ ಹೆಣ್ಣನ್ನು ನೋಡಿ ಮದುವೆ ಮಾಡ್ತೀನಿ.... ಇವತ್ತೇ ನಿನ್ನ ಅಣ್ಣನಿಗೆ ಈ ವಿಷಯವನ್ನು ತಿಳಿಸ್ತೀನಿ."

"ಬೇಡ, ಬೇಡ. ಪ್ಲೀಸ್ ಬೇಡ. ಅಣ್ಣನಿಗೆ ಏನನ್ನು ತಿಳಿಸಬೇಡಿ."

"ಮತ್ತೆ? ಹೀಗೇ ಕೊರಗ್ತೀಯಾ ? ಅದು ಸರಿಯಾ ?"

"ಮತ್ತೆ... ಒಂದು ಸಲ, ಇನ್ನೊಂದೇ ಒಂದು ಸಲ ಅವಳು ನನಗೆ ಭೇಟಿಯಾದರೆ ಸಾಕು. ನಾನು ಅವಳ ಹತ್ತಿರ ಮಾತನ್ನಾಡಬೇಕು. ಮುಖ್ಯವಾದ ವಿಷಯವಿದೆ."

"ಅವಳಿಗೆ ನಿನ್ನ ಅಗತ್ಯವಿಲ್ಲದಿದ್ದರೆ! ನಿನ್ನೊಡನೆ ಮಾತನಾಡಲು ಇಷ್ಟವಿಲ್ಲದಿದ್ದರೆ..... ನೀನೇಕೆ ಒದ್ದಾಡ್ತೀಯ ? ಅವಳಿಗೆ ನೀನು ಬೇಡವಾದರೆ, ನಿನಗೂ ಅವಳು ಬೇಡ."

"ಹಾಗಂತ ಅವಳೇ ಹೇಳಿ ಬಿಡಲಿ. ಆಗ ನನಗೆ ನಿಶ್ಚಿಂತೆಯಾಗುತ್ತೆ."

"ಒಳ್ಳೆ ಹುಚ್ಚುಹುಡುಗ ನೀನು. ಅವಳನ್ನು ಎಲ್ಲೀಂತ ಹುಡುಕುವುದು?"

"ಅವಳ ಹೆಸರು ಸಂಧ್ಯಾ ಅಂತ. ಅವಳ ಮನೆಯ ರಸ್ತೆ ನನಗೆ ಗೊತ್ತು. ಅಲ್ಲಿ ಅವಳನ್ನು ವಿಚಾರಿಸಿದರೆ ಗೊತ್ತಾಗಬಹುದು."

"ನಿನಗೋಸ್ಕರ, ನಾನು ಈಗ ಈ ಕೆಲಸವನ್ನು ಮಾಡಬೇಕು ಅನ್ನು."

"ನಿಮಗೆ ಇಷ್ಟವಿಲ್ಲದಿದ್ದರೆ ಬಿಡಿ. ಬಲವಂತ ಏನಿಲ್ಲ."

"ಹಾಗೆಲ್ಲಿ ಹೇಳಿದೆ ? ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗು. ನಾನು ಪ್ರಯತ್ನಿಸ್ತೀನಿ."

"ಥ್ಯಾಂಕ್ ಯೂ ಅತ್ತಿಗೆ" ಎಂದು ಅವಳ ಕೈಗಳನ್ನು ಹಿಡಿದ.

"ಹೂಂ, ಹೂಂ, ಸಾಕು ಸಾಕು" ಎಂದು ಎದ್ದು ಹೊರಡಲು ಸಿದ್ಧವಾದಳು. ನಿನ್ನ ಅಣ್ಣ ಬಂದ ನಂತರ ಹೋಗೋಣ. ಮಕ್ಕಳು ಮನೆಯಲ್ಲೇ ಇರಲಿ."

ಅವನು ಒಪ್ಪಿದ. ಅಣ್ಣ ಬಂದ ನಂತರ, ತಿಂಡಿ ಕಾಫಿ ಮುಗಿಸಿ, ಇಬ್ಬರೂ ಷಾಪಿಂಗ್ ನೆಪ ಹೇಳಿ, ಮನೆಯಿಂದ ಹೊರಬಿದ್ದರು.

ಸಂಧ್ಯಾಳ ಮನೆಯ ರಸ್ತೆಯ ತಿರುವಿನಲ್ಲಿ ಕಾರನ್ನು ನಿಲ್ಲಿಸಿದ. ಅವಳು ಇಳಿಯುವ ಮುಂಚೆ ಅವನ ಕೈ ಅದುಮಿ, ವಿಶ್ವಾಸವನ್ನು ವ್ಯಕ್ತಪಡಿಸಿದಳು. ಆದರೆ ಮನದಲ್ಲಿ ಅಶಾಂತಿ.

"ಇಲ್ಲೇ ಎಲ್ಲೋ ಅವಳ ಮನೆ ಬರುತ್ತೆ. ನಾನೂ ನೋಡಿಲ್ಲ" ಎಂದ.

"ಪರವಾಗಿಲ್ಲ, ನೋಡೋಣ ಹುಡುಕ್ತೀನಿ ಎಂದು ಅವಳು ಸರಸರನೆ ನಡೆದಳು. ಎಷ್ಟು ಹೊತ್ತು ಒಬ್ಬನೇ ಕುಳಿತಿದ್ದನೋ, ಕತ್ತಲಾಗುತ್ತಾ ಬಂದಿತ್ತು. ಅವಳು ಬಂದು ಕಾರಿನ ಒಳಗೆ ಕುಳಿತಳು."

"ಮನೆಯೇನೋ ಸಿಕ್ಕಿತು. ಆದರೆ ಅವಳು ಮನೆಯಲ್ಲಿರಲಿಲ್ಲ. ಅವಳ ಗಂಡ ಇದ್ದ. ಅಡ್ರೆಸ್ ಕೊಟ್ಟು ಬಂದಿದೀನಿ. ನಾಳೆ ಬರಬಹುದು."

"ಯಾವ ಅಡ್ರೆಸ್ಸು!" ಗಾಬರಿಯಿಂದ ಕೇಳಿದ.

"ಚಿಂತಿಸಬೇಡ. ನನ್ನ ಅಡ್ರೆಸ್ಸು."

"ಒಳ್ಳೇದಾಯ್ತು. ಏನು ಹೇಳಿದಿರಿ?"

"ಸಂಧ್ಯಾ ನನ್ನ ಸ್ನೇಹಿತೆ. ನಮ್ಮ ಮನೆಗೆ ಬರಲಿ ಅಂತ ಹೇಳಿದೆ."

"ಅವಳು ಎಲ್ಲಿಗೆ ಹೋಗಿದಾಳೆ ಅಂತ ಕೇಳಿದ್ರಾ ? " ಆತಂಕದ ಧ್ವನಿಯಿಂದ ಅವನು ಮಾತನಾಡಿದಾಗ ಅವಳು ನಕ್ಕಳು. "ಇಲ್ಲಪ್ಪಾ, ನಾನು ಕೇಳಲಿಲ್ಲ, ನಾಳೆ ಅವಳು ಸಿಕ್ಕಾಗ ನೀನೇ ಕೇಳು." ಅವಳು ಆಶ್ರಮಕ್ಕೆ ಹೋಗಿರಬಹುದೇ ಎಂಬ ಅನುಮಾನ ಮತ್ತೆ ಕಾಡಿತು.

"ನನಗೆ ಅನುಮಾನ, ಅವಳು ಬರುವುದಿಲ್ಲ."

"ಮತ್ತೊಮ್ಮೆ ನಾವೇ ಬಂದು ನೋಡಿದ್ರಾಯ್ತು" ಸಂತೈಸಿದಳು.

"ಅತ್ತಿಗೇ ನಿಮಗೆ ನನ್ನ ಬಗ್ಗೆ ಬೇಸರವೇ!"

"ಇಲ್ಲಪ್ಪಾ ಇಲ್ಲ, ಬೇಸರಿಸಿಕೊಂಡಿದ್ದರೆ, ನಾನು ಇಲ್ಲಿಯ ತನಕ ಬರ್ತಿದ್ನೆ ? ಆದರೆ ನಿನ್ನ ಅಣ್ಣನಿಗೆ ತಿಳಿದರೆ ಮಾತ್ರ ಕಷ್ಟ.. ಅವರಿಗೆ ಇದೆಲ್ಲ ಆಗದು."

"ಪ್ಲೀಸ್. ಅವನಿಗೆ ಈಗಲೇ ಏನನ್ನೂ ಹೇಳಬೇಡಿ" ದೈನ್ಯದಿಂದ ಕೇಳಿಕೊಂಡ.

"ಆಯ್ತು" ಅವಳು ಆಶ್ವಾಸನೆ ಇತ್ತಳು. ಇಬ್ಬರೂ ಮನೆಯ ದಾರಿಯನ್ನು ಹಿಡಿದರು. ಬರೀ ಕೈಯಲ್ಲಿ ಹಿಂತಿರುಗಿದ ಅವರನ್ನೇ ದಿಟ್ಟಿಸಿದ ಅಣ್ಣ ಕೇಳಿದ.

"ಷಾಪಿಂಗ್ ಅಂತ ಅಂದ್ರಿ! ಏನಿದು ಹಾಗೆ ಬಂದಿದೀರಲ್ಲ"

".ಯಾಕೋ ಏನೋ ಎಲ್ಲಾ ಅಂಗಡಿಗಳೂ ಕ್ಲೋಸ್ ಆಗಿದ್ದವು" ಗೀತ ನುಡಿದಳು.

"ಮತ್ಯಾಕೆ ಇಷ್ಟು ಹೊತ್ತು? ಇನ್ನೆಲ್ಲಿಗೆ ಹೋಗಿದ್ರಿ ಇಬ್ರೂ?"

"ಕಾರು ಮಧ್ಯೆ ಕೈಕೊಡ್ತು" ಅನಾಯಾಸವಾಗಿ ಗೀತ ಸುಳ್ಳು ಹೇಳಿ ಅಣ್ಣನನ್ನು ನಂಬಿಸಿದಾಗ ಅವನು ಬೆರಗಾಗಿದ್ದ. ಹೆಂಗಸರ ಮನಸ್ಸಿನ ಆಳದಲ್ಲಿ ಏನು ಅಡಗಿದೆ ಅಂತ ಯಾವ ಗಂಡಸೂ ಅರಿಯಲಾರ ಅಂತ ಎಂದುಕೊಂಡ.

ಆ ರಾತ್ರಿ ಅವನು ಅಲ್ಲೇ ಉಳಿದುಕೊಂಡ. ಗೀತ ರುಚಿ ರುಚಿಯಾದ ಅಡಿಗೆ ಮಾಡಿ ಬಡಿಸಿದಳು. ಗೀತ ಗಂಡನೊಡನೆ ಏನೂ ಹೇಳುವುದಿಲ್ಲ ಅಂತ ಹೇಳಿದ್ದರೂ ದಿನೇಶನಿಗೆ ಅನುಮಾನ. ಮಲಗುವ ಮುಂಚೆ ಮತ್ತೊಮ್ಮೆ ಹೇಳಿದ.

"ಪ್ಲೀಸ್ ಅತ್ತಿಗೆ ಅಣ್ಣನಿಗೆ ಏನೂ ಹೇಳಬೇಡಿ."

"ನನ್ನ ಮೇಲೆ ನಿನಗೆ ನಂಬಿಕೆ ಇಲ್ಲ ಅಲ್ಲವೆ? ಈ ರಾತ್ರಿ ನಾನು ಮಕ್ಕಳ ಜತೆಯಲ್ಲಿ ಮಲಗ್ತೀನಿ, ನೀನು ನಿನ್ನ ಅಣ್ಣನ ಜತೆ ಮಲಗು."

"ಅವನು ವಿಪರೀತ ಗೊರಕೆ ಹೊಡೀತಾನೆ. ನನಗೆ ನಿದ್ದೆ ಬರುಲ್ಲ."

"ಏನಿಲ್ಲದೇನೇ ಈ ರಾತ್ರಿ ನಿನಗೆ ನಿದ್ದೆ ಬರುಲ್ಲ. ನನಗೆ ಗೊತ್ತು. ನಾನು ಒಂದು ರಾತ್ರಿಯಾದರೂ ಗೊರಕೆಯ ಅಬ್ಬರದಿಂದ ದೂರವಾಗಿ ಮಲಗ್ತೀನಿ" ಎಂದು ಹೇಳಿ ಮಕ್ಕಳು ಮಲಗಿದ್ದ ರೂಮಿಗೆ ಹೋದಳು. ಅಣ್ಣನ ಜತೆ ಅವನ ರೂಮಿನಲ್ಲಿ ಮಲಗುವ ಇಚ್ಛೆ ಇಲ್ಲದೆ ದಿನೇಶ ಹೊರಗಿನ ಸೋಫಾದ ಮೇಲೆ ಉರುಳಿಕೊಂಡ. ನಿದ್ದೆ ಅವನಿಂದ ದೂರವಾಗಿತ್ತು.

* * * *

ಬೆಳಿಗ್ಗೆ ಗೀತ ಎದ್ದು ಅಡಿಗೆ ಮನೆಯನ್ನು ಸೇರಿದ ನಂತರ ಇವನು ಎದ್ದು ಮಕ್ಕಳ ರೂಮಿಗೆ ಬಂದ. ಮಕ್ಕಳು ಎದ್ದು ಸ್ಕೂಲಿಗೆ ಹೋಗಲು ಸಿದ್ಧರಾಗುತ್ತಿದ್ದರು. ಅಣ್ಣ ಕಾಲೇಜಿಗೆ ಹೊರಟ. ತಾನೂ ಸಿದ್ಧನಾಗಿ, ಕಾರಿನಲ್ಲಿ ಅವರುಗಳನ್ನು ಕೂರಿಸಿಕೊಂಡು ಹೊರಟ. ಅರ್ಧ ಮುಕ್ಕಾಲು ಗಂಟೆಯ ನಂತರ ವಾಪಸ್ಸಾದ. ಅವಳು ಬಂದಿರಬಹುದು ಎಂದ ಊಹಿಸಿದ್ದ.

"ಅವಳು ಬರಬಹುದು ಅಂತೀರಾ ?" ಅನುಮಾನದಿಂದ ಕೇಳಿದ.

"ಯಾಕಪ್ಪಾ ಇಷ್ಟು ಆತಂಕ ? ನಿನ್ನ ಮನಸ್ನಲ್ಲಿ ಏನು ಇದೆ ಅಂತ ಹೇಳು"

"ನನ್ನ ಮನಸ್ನಲ್ಲಿ ಏನು ನಡೀತಿದೆ ಅಂತ ನಿಮಗೊಬ್ಬರಿಗೇ ತಿಳಿದಿರುವುದು. ಸಂದೇಹದ ಕೂಪದಲ್ಲಿದೀನಿ."

"ಸರಿ ಮತ್ತೆ ನನಗೂ ಆತಂಕ ಹೆಚ್ಚಿಸಬೇಡ. ಮೊದಲೇ ನಾವು ಮಾಡುತ್ತಿರುವುದು ಸರಿಯೋ ತಪ್ಪೋ ಅಂತ ತಿಳಿಯದ ಗೊಂದಲದಲ್ಲಿದೀವಿ. "

"ನನ್ನಿಂದ ನಿಮಗೆಷ್ಟು ತೊಂದರೆ ಅಲ್ವಾ ?"

"ಚೆನ್ನಾಗಿದೆ ನಿನ್ನ ಮಾತು. ಬೇಗ ತಿಂಡಿ ತಿಂದು ಬಿಡು."

"ಆಗಲಿ" ಎಂದು ಎದ್ದ. ಸ್ನಾನ ಮಾಡಿ ತಲೆ ಒರೆಸಿಕೊಳ್ಳುತ್ತಾ ಹೊರಗೆ ಬಂದ. ಗೇಟು ತೆರೆದ ಸದ್ದಾಯಿತು. ಇಣುಕಿ ನೋಡಿದ. ಒಮ್ಮೆಗೇ ನೂರಾರು ಭಾವನೆಗಳು ಅವನನ್ನು ಮುತ್ತಿಕ್ಕಿದ್ದವು. ಮನಸ್ಸಿನ ಆನಂದವನ್ನು ಹತ್ತಿಕ್ಕಲಾರದೆ..... 'ಅತ್ತಿಗೇ' ಎಂದು ಕೂಗು ಹಾಕಿದ. ಗಾಬರಿಯಿಂದ ಅವಳು ಹೊರಗೆ ಬಂದಳು. "ಅತ್ತಿಗೆ ಅವಳು ಬಂದೇ ಬಿಟ್ಟಳು" ಎಂದ ಉದ್ವೇಗದಿಂದ.

"ಯಾರೋ "ಎನ್ನುತ್ತಾ ಅವಳೂ ಬಾಗಿ ನೋಡಿದಳು.

"ಅವಳೇ..... ಅವಳೇ ಸಂಧ್ಯಾ. ಹೋಗಿ ಬಾಗಿಲು ತೆಗೆಯಿರಿ" ಎಂದ.

"ನೀನೇಬಾಗಿಲು ತೆಗಿ...."

"ಬೇಡ ನನ್ನನ್ನು ನೋಡಿದೊಡನೆ ಅವಳು ಹೊರಟು ಹೋದರೆ ?"

"ಹೌದಲ್ವಾ ? " ಎನ್ನುತ್ತಾ ಗೀತ ಬಾಗಿಲನ್ನು ಸಮೀಪಿಸಿದಳು.

ದಿನೇಶ ರೂಮನ್ನು ಒಳಹೊಕ್ಕು ಬಾಗಿಲ ಮರೆಯಲ್ಲಿ ನಿಂತ. ಬಾಗಿಲನ್ನು ತೆಗೆದು ಎದುರಿಗೆ ನಿಂತಿದ್ದ ಸಂಧ್ಯಾಳನ್ನೇ ದಿಟ್ಟಿಸಿದಳು ಗೀತ. ಅವಳು ನಮಸ್ಕಾರ ಎಂದಳು ವಿನಯದಿಂದ.

"ನಮಸ್ಕಾರ ಯಾರು ಬೇಕಾಗಿತ್ತು!" ಪ್ರಶ್ನಿಸಿದಳು.

"ನೀವು ಗೀತ ಎನ್ನುವವರು ತಾನೇ .....?"

"ಹೌದು.....ನೀವು?"

"ನೆನ್ನೆ ದಿನ ನೀವು ನಮ್ಮ ಮನೆಗೆ ಬಂದು, ನಿಮ್ಮ ವಿಳಾಸ ಕೊಟ್ಟು ಬರುವಂತೆ ತಿಳಿಸಿದ್ದಿರಂತಲ್ಲ ... ಯಾಕೆ? "

"ಹೌದು.... ಆದರೆ ಸುಲಭವಾಗಿ ಮನೆಯನ್ನು ಹುಡುಕಿಬಿಟ್ರಿ ಪರವಾಗಿಲ್ಲ."

"ಇದು ನಮ್ಮ ಮೇಷ್ಟ್ರ ಮನೆ.... ಮೇಷ್ಟ್ರು ಇದಾರೆಯೆ ?"

"ಇಲ್ಲ ಕಾಲೇಜಿಗೆ ಹೋಗಿದಾರೆ...." ಅವರುಗಳ ಸಂಭಾಷಣೆಯನ್ನು ಕೇಳಿಸಿಕೊಂಡ ದಿನೇಶನಿಗೆ ಎದೆ ಢವಗುಟ್ಟಿತು.

"ನಾನೇ ನಿಮ್ಮನ್ನು ಬರಹೇಳಿದೆ...... ಒಂದ್ನಿಮಿಷ ಕೂತ್ಕೊಳ್ಳಿ. ಈಗ ಬಂದೆ" ಎನ್ನುತ್ತಾ ಒಳಗೆ ಬಂದು ದಿನೇಶನ ಬಳಿಗೆ ಬಂದು ಪಿಸುಗುಟ್ಟಿದಳು.

"ನಾನು ಆಮೇಲೆ ಬರ್ತೀನಿ. ನೀವು ಹೋಗಿ" ಅವನು ಹೇಳಿ ಕಳಿಸಿದ.

ಗೀತ ಬಂದು ಅವಳ ಎದುರು ಕುಳಿತು ಎಚ್ಚರಿಕೆಯಿಂದ ಮಾತನ್ನು ಪ್ರಾರಂಭಿಸಿದಳು.

"ಇಲ್ಲಿಂದ ಇಪ್ಪತ್ತು ಇಪ್ಪತ್ತೈದು ಮೈಲಿಗಳ ದೂರದಲ್ಲಿ ಒಂದು ಎಸ್ಟೇಟಿದೆ. ಅಲ್ಲಿಗೆ ನೀವು ಒಂದೆರಡು ಸಲ ಹೋಗಿದೀರಿ.... ಅಲ್ವೆ ? "

ಅವಳ ಮುಖ ಬಿಳಿಚಿಕೊಂಡಿತು. ತಬ್ಬಿಬ್ಬಾದಳು.

"ನಿಮಗೆ ಹೇಗೆ ಗೊತ್ತಾಯ್ತು!" ಅವಳು ಪೆಚ್ಚಾಗಿದ್ದಳು

"ನನಗೆ ಎಲ್ಲಾ ಗೊತ್ತು. ಅಲ್ಲಿ ಏನೇನು ನಡೆದಿದೆ ಎನ್ನುವುದು ಸಹ ತಿಳಿದಿದೆ. "

"ನಿಮಗೆ ಯಾರು ಹೇಳಿದ್ರು ?" ಕೆಟ್ಟ ದನಿಯಲ್ಲಿ ಕೇಳಿದಳು. ಆತಂಕ ತುಂಬಿತ್ತು.

"ಹಾಗಾದ್ರೆ ಎಲ್ಲಾ ನಿಜ.... ಆದರೆ ಈಚೆಗೆ ನೀವು ತುಂಬಾ ದಿನಗಳಿಂದ ಮತ್ತೆ ಅಲ್ಲಿಗೆ ಹೋಗಿಲ್ಲ ಏಕೆ ?"

"ಹೋಗುವ ಅವಕಾಶವೇ ಆಗಲಿಲ್ಲ"

"ಅವಕಾಶ ಸಿಕ್ಕರೆ ಹೋಗ್ತೀರಾ ?"

"ಹೋಗಬೇಕು, ಅವರನ್ನೊಮ್ಮೆ ಕ್ಷಮೆ ಕೇಳಬೇಕು ಅಂತ ಆಸೆ ಇದೆ. ಆದರೆ ಏನೋ ಭಯ.... ಅದ್ಸರಿ ನಿಮಗೆ ಹೇಗೆ ತಿಳೀತು ಇದೆಲ್ಲಾ! ಅವರು ನಿಮಗೇನಾಗ್ಬೇಕು ?"

"ಅಂದರೆ ನೀವು ಮಾಡಿದ್ದು ತಪ್ಪು ಅಂತ ಈಗ ಅನ್ನಿಸ್ತಿದೆಯೆ !"

"ನನ್ನದು ತಪ್ಪು ಅಂತ ಹೇಳಲಾರೆ. ಆದರೆ ಅವರ ಮನಸ್ಸಿಗೆ ವಿರುದ್ಧವಾಗಿ, ಬಲವಂತವಾಗಿ ವರ್ತಿಸಿದೆ. ಈಗ ನನಗೆ ಹೀನಾಯವೆನಿಸಿದೆ, ಕ್ಷಮೆ ಕೇಳ್ತೀನಿ."

"ಈಗ ಹೀನಾಯ ಪಟ್ಟುಕೊಂಡರೇನು ಫಲ ? ಆಗ ದುಡುಕಿ, ಈಗ ಪಶ್ಚಾತ್ತಾಪ ಪಡುತ್ತಿದೀರಿ. ಇದರಿಂದ ಎಷ್ಟು ಜನಕ್ಕೆ ತೊಂದರೆ .... ಗೊತ್ತಾ? ನೆಮ್ಮದಿ ಕೆಡುಲ್ವಾ ?"

"ತೊಂದರೆ ? ಯಾರಿಗೆ ? ... ಅವರಿಗೇನಾದ್ರೂ ತೊಂದರೆ ಆಗಿದೆಯೆ ?"

"ಒಬ್ಬ ಹೆಂಗಸಾಗಿ, ಇನ್ನೊಬ್ಬ ಹೆಂಗಸಿನ ಎದುರಿಗೆ ಹೀಗೆ ಮಾತನಾಡುತ್ತಿದೀರಲ್ಲ. ಈ ವಿಷಯ ನಿಮ್ಮ ಯಜಮಾನರಿಗೆ ತಿಳಿದರೆ ಏನು ಗತಿ ಅಂತ ಎಂದಾದರೂ ಚಿಂತಿಸಿದೀರಾ ? ನಿಮ್ಮ ವಿಲಕ್ಷಣವಾದ ಆಸೆ ಸರಿಯಲ್ಲ. ಮಹಾ ತಪ್ಪು. ಮರ್ಯಾದೆ ತರುವ ಕೆಲಸವಲ್ಲ."

"ಆ ಚಿಂತೆ ನನಗಿಲ್ಲ. ಅದನ್ನಲ್ಲ ಈ ಮುಂಚೆಯೇ ಯೋಚಿಸಿ ತೀರ್ಮಾನ ಕೈಗೊಂಡಿದ್ದೆ.... ಅವರಿಗೆ ಏನು ತೊಂದರೆಯಾಗಿದೆ ಅಂತ ಹೇಳಿ ಅಷ್ಟು ಸಾಕು."

"ಅಂದರೆ ? ನಿಮಗೆ ನಿಮ್ಮ ಗಂಡನಿಗೆ ಮೋಸಮಾಡಿದೆ ಅನಂತ ಏನೂ ಅನ್ನಿಸುತ್ತಿಲ್ಲವೇ ! " ನಿಮ್ಮಂಥ ಹೆಂಗಸನ್ನು ನಾನೆಲ್ಲೂ ಕೇಳಿಲ್ಲ; ಕಂಡಿಲ್ಲ.

"ಮೋಸ ? ಅವರು ನನಗೆ ಮೋಸ ಮಾಡಿಲ್ಲವೆ ! ಮದುವೆಯಾಗಿ ಹತ್ತು ವರ್ಷಗಳಾಯಿತು. ಇದುವರೆಗೂ ಏನೇನೋ ಮಾತನ್ನಾಡಿ ನನ್ನನ್ನು ವಂಚಿಸುತ್ತಲೇ ಬಂದಿದಾರೆ. .... ಇದು ಮೋಸ ತಾನೇ ? " ಅದ್ಸರಿ ಇದನ್ನೆಲ್ಲ ನೀವ್ಯಾಕೆ ಕೇಳ್ತಿದೀರಿ ? ನಾನ್ಯಾಕೆ ಹೇಳಬೇಕು? " ಸವಾಲೆಸೆದಳು.

"ಅದಕ್ಕೇ ನೀವು ಇನ್ನೊಬ್ಬ ಗಂಡಸನ್ನ ಮೋಸಗೊಳಿಸಿದ್ದು ತಪ್ಪಲ್ಲವೆ ?.... ಅವರ ಪಾಡಿಗೆ ಅವರು ಇದ್ದರು. ಅವರನ್ನು ತಪ್ಪು ದಾರಿಗೆ ಎಳೆದಿದ್ದು ತಪ್ಪಲ್ಲವೇ ? "

"ಪರಿಸ್ಥಿತಿ ಹಾಗೆ ಒದಗಿತು. ಅದನ್ನ ನಾನು ಮೋಸ ಎಂದು ಭಾವಿಸಿಲ್ಲ. ಅವರು ನನ್ನನ್ನು ಸ್ನೇಹಿತೆ ಎಂದು ಕರೆದರು. ಗೌರವಿಸಿದರು... ಅಸಹಾಯಕ ಸ್ಥಿತಿಯಲ್ಲಿದ್ದ ನನ್ನನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು. ನನ್ನ ಮಾನವನ್ನು ಕಾಪಾಡಲು ನನಗೆ ಒಂದು ಸೀರೆಯನ್ನು ತಂದುಕೊಟ್ಟರು. ಅವರ ಉಪಕಾರಕ್ಕೆ ಸೋತು ನಾನು ಅವರನ್ನು ಮೆಚ್ಚಿದೆ. ಅವರ ಒಂಟಿತನವನ್ನು ನೀಗಲು ಅವರ ಸಹವಾಸವನ್ನೂ ಬಯಸಿದೆ. ಅದು ತಪ್ಪೇ ? ನನ್ನಿಂದ ಅವರಿಗೂ ಉಪಕಾರವಾಗಿದೆಯಲ್ಲ ಅವರಿಗೂ ನಾನು ಬೇಕಾಗಿತ್ತು."

"ಆದರೆ ಇದು ಒಬ್ಬ ವಿವಾಹಿತ ಸ್ತ್ರೀ ಮಾಡುವ ಕೆಲಸವಲ್ಲ. ನಾಚಿಕೆಗೇಡು."

"ಇಷ್ಟೆಲ್ಲಾ ಆಡುತ್ತಿರುವ ನೀವು ಆತನ ಹತ್ತಿರದ ಸಂಬಂಧಿಯಾಗಿರಲೇಬೇಕು.... ಆದ್ದರಿಂದ ಹೇಳ್ತೀನಿ. ಈ ಉಪದೇಶವನ್ನು ನೀವು ಅವರ ಹೆಂಡತಿಗೆ ಏಕೆ ಮಾಡಲಿಲ್ಲ? ಆಕೆ ಆತನನ್ನು ಬಿಟ್ಟು ಹೋದದ್ದು ತಪ್ಪು ಅಂತ ಗೊತ್ತು ತಾನೆ?"

ಅವಳ ಕಪಾಳಕ್ಕೆ ಹೊಡೆದಂತಾಯಿತು. ಎಂತಹ ದಿಟ್ಟ ಹೆಣ್ಣು.... ಹೋಗಿ ಹೋಗಿ ದಿನೇಶ ಇವಳಿಗೆ ಸಹಾಯ ಮಾಡಿದಾನಲ್ಲ ಅಂತ ಎನಿಸಿತು. ಅವಳ ಮುಖದ ಬಣ್ಣ ಬದಲಾಯಿಸಿದ್ದನ್ನು ಸಂಧ್ಯಾ ಗಮನಿಸಿದಳು. ಅವಳ ಉದ್ವೇಗವೂ ಕಡಿಮೆ ಆಗಿತ್ತು.

"ಕ್ಷಮಿಸಿ ಏನೇನೋ ಆಡಿಬಿಟ್ಟೆ. ಈಚೆಗೆ ನನ್ನ ಮನಃಶಾಂತಿಯೇ ಸರಿಯಿಲ್ಲವಾಗಿದೆ. ಏನೇನೋ ಆಡಿ ಬಿಡ್ತೀನಿ. ನಾನು ದಿನೇಶನ್ನ ನೋಡಬೇಕು. ಅವರ ಹತ್ತಿರ ಮಾತನಾಡಬೇಕು ಅಂತ ಅನ್ನಿಸ್ತಿದೆ. ಆದರೆ ಆ ದಿನ ಅವರು "ಹೋಗಿ ಹೋಗಿ" ಎಂದು ಬಲವಂತವಾಗಿ ಕಳಿಸಿದ್ದನ್ನು ಮರೆಯಲು ಸಾಧ್ಯವಾಗುತ್ತಿಲ್ಲ. ನಾನು ತಪ್ಪು ಮಾಡಿದವಳು ಅಂತ ಅವರ ಮನಸ್ಸಿನಲ್ಲಿದೆ. ನಾನು ಹೇಗೆ ಹೋಗಲಿ ? ನೀವು ಅವರ ಅಕ್ಕನೋ ತಂಗಿಯೋ ಇರಬಹುದು. ನೀವೂ ಸಹ ನನ್ನನ್ನು ತಪ್ಪಿತಸ್ಥಳೆಂದೇ ತಿಳಿದಿದೀರಿ... ನಿಮ್ಮಿಂದ ಏನನ್ನೂ ನಿರೀಕ್ಷಿಸಲು ಸಾಧ್ಯವಿಲ್ಲ. ನನ್ನ ಪಾಡಿಗೆ ನನ್ನ ಬಿಟ್ಟುಬಿಡಿ. ನಾನು ಹೋಗ್ತೀನಿ."

"ದಿನೇಶ ತುಂಬಾ ಒಳ್ಳೆಯ ಹುಡುಗ. ನೀವು ಬಲವಂತವಾಗಿ ಅವನಿಂದ ಈ ಕೆಲಸವನ್ನು ಮಾಡಿಸಬಾರದಾಗಿತ್ತು. ಅವನ ಶೀಲವನ್ನು ಕೆಡಿಸಿದಂತಾಗಲಿಲ್ಲವೇ ?"

"ಮನುಷ್ಯನಿಂದ ಕೆಲವು ಸಲ ಅವಿವೇಕಗಳು ನಡೆದು ಹೋಗುತ್ತವೆ ಅಲ್ಲವೆ ? ಹೋಗಲಿ, ಈಗ ನನ್ನನ್ನು ಕರೆಸಿದ ಉದ್ದೇಶ ? ಅದನ್ನಾದರೂ ಹೇಳಿ" ದಿಟ್ಟನದಿಂದ ಕೇಳಿದಳು.

"ಪರವಾಗಿಲ್ಲ, ಬಹಳ ಜೋರಾಗಿದಾಳೆ ಎಂದು ಭಾವಿಸಿದ ಗೀತ ಏನನ್ನೂ ಹೇಳದೇ, ಒಳಗೆ ಹೋಗಿ, ಮತ್ತೆ ದಿನೇಶನೊಂದಿಗೆ ಈಚೆಗೆ ಬಂದಳು. ಅವಳು ಕತ್ತೆತ್ತಿ ನೋಡಿ ಅಚ್ಚರಿಯಿಂದ ಕಣ್ಣರಳಿಸಿದಳು.

"ಇವನು ನನ್ನ ಮೈದುನ. ಈ ಮುಂಚೆ ಒಂದು ಮದುವೆಯಾಗಿ, ಒಂದು ಮಗೂ ಸಹ ಇದೆ. ಇವನು ನನ್ನ ತಮ್ಮನಂತೆ. ಮಗನಂತೆ, ನನಗೆ ಆತ್ಮೀಯ ಗೆಳೆಯನಂತೆ. ರಾತ್ರಿ ನಿಮ್ಮ ಯೋಚನೆಯಲ್ಲಿ ತೊಳಲಾಡಿದ್ದಾನೆ. ನನ್ನೊಡನೆ ಎಲ್ಲವನ್ನೂ ಹೇಳಿದಾನೆ. ಅವನ ತೊಳಲಾಟ ನೋಡಲಾರದೇ ನಾನೇ ನಿಮ್ಮನ್ನು ಬರಹೇಳಿದೆ... ಇವನಿಗೋಸ್ಕರ ಇಷ್ಟು ಮಾತಾಡಬೇಕಾಯ್ತು."

"ಅಂದರೆ ..... ? ನಿಮಗೆ ಎಲ್ಲವನ್ನೂ ಇವರೇ ಹೇಳಿದ್ದರೇ ?"

"ಹೂಂ, ಅವನಿಗೆ ನಾನೇ ಸರ್ವಸ್ವ. ನನ್ನೊಡನೆ ಎಲ್ಲವನ್ನು ಹೇಳುತ್ತಾನೆ. ನೀವಿಬ್ಬರೂ ಮಾತನಾಡಿ. ನನಗೆ ಕೆಲಸವಿದೆ ಹೋಗ್ತೀನಿ" ಎನ್ನುತ್ತಾ ಒಳಸರಿದಳು. ಸಂಧ್ಯಾ ಅವಳ ಬೆನ್ನನ್ನೇ ನೋಡಿದಳು.

ದಿನೇಶ ಅವಳೆದುರಿಗೆ ಕೂತ. ಅವಳು ಇತ್ತ ತಿರುಗಿ ಅವನನ್ನೇ ದಿಟ್ಟಿಸಿದಳು.

"ಇಲ್ಲಿ ಧೈರ್ಯವಾಗಿ ಎಲ್ಲಾ ಮಾತನಾಡಲು ಸಾಧ್ಯವಿಲ್ಲ, ಎಸ್ಟೇಟಿಗೆ ಬರ್ತೀರಾ?"

"ನೀವು ನನ್ನನ್ನ ಕರೀತಿದೀರಾ ?" ಆಶ್ಚರ್ಯದಿಂದ ಕೇಳಿದಳು.

"ಹೌದು ಎಷ್ಟೋ ವರ್ಷಗಳ ನಂತರ ನನಗೊಬ್ಬ ಸ್ನೇಹಿತರು ಸಿಕ್ಕಿದರು ಅಂತ ಅಂದುಕೊಂಡಿದ್ದೆ. ಆದರೆ ಸ್ನೇಹಕ್ಕೆ ಭಂಗ ಬಂತು. ಆಮೇಲೆ ತುಂಬಾ ಪಶ್ಚಾತ್ತಾಪ ಪಟ್ಟೆ. ನೀವಾಗಿಯೇ ಬರುತ್ತೀರೇನೋ ಅಂತ ಸಹ ಕಾದಿದ್ದೆ ಅದು ನಿಜ."

"ಬರಬೇಡ ಹೋಗು ಅಂತ ನೀವಾಗಿಯೇ ಕಳಿಸದಿದ್ದರೆ ಖಂಡಿತಾ ನಾನು ಬರುತ್ತಿದ್ದೆ... ಅದೂ ನಿಜ."

"ಹಾಗಾದ್ರೆ ....ಯಾವಾಗ ಬರ್ತೀರಿ ? ಈಗ ಬರ್ತೀರಾ ? ಹೋಗೋಣ"

"ಇಲ್ಲ, ನಾಳೆ ನಾಡಿದ್ದರಲ್ಲಿ ಬರ್ತೀನಿ.... ಈಗ ನಾನು ಮನೆಗೆ ಹೋಗ್ಬೇಕು."

"ನನ್ನ ಮೇಲೆ ಬೇಜಾರೇನಿಲ್ಲ ತಾನೇ.... ಬೈದು ಬಿಟ್ಟೆನಲ್ಲ.ಹೊಡೆದಿದ್ದೆ ಕೂಡಾ."

"ನನಗೆ ಪ್ರಿಯರಾದವರು ನೀವು. ನಿಮ್ಮ ಮೇಲೆ ಬೇಜಾರೇ ? ನಾನು ನಿಮ್ಮನ್ನು ಆಳವಾಗಿ ಪ್ರೀತಿಸ್ತೀನಿ" ಎಂದಳು ಯಾವ ಅಳುಕೂ ಇಲ್ಲದೆ.

ಅವನು ಹುಬ್ಬೇರಿಸಿದ."ಪ್ರೀತಿ ಪ್ರೇಮದ ಮಾತುಕತೆ. ದೇಹ ಸಂಬಂಧ ಇಲ್ಲದೇ ಬರೀ ಸ್ನೇಹಿತರಂತೆ ಇರಲು ಸಾಧ್ಯವಿಲ್ಲವೇ ?"

"ಅದನ್ನು ಮತ್ತೊಮ್ಮೆ ಚರ್ಚಿಸೋಣ. ಈಗ ನಾನು ಹೊರಡ್ತೀನಿ !"

"ಬಂದಿದ್ದಕ್ಕೆ ಥ್ಯಾಂಕ್ಸ್" ಎಂದ. ಅವಳು ಮುಗುಳ್ನಕ್ಕುತಲೆ ಆಡಿಸಿದಾಗ ಅವನ ಹೃದಯ ಹಗುರವಾಯಿತು. ಅವಳು ಹೊರಟಾಗ ಅವನು ಅತ್ತಿಗೆಯನ್ನು ಕರೆದ. ಗೀತಾ ವಿಶ್ವಾಸದಿಂದ ಅರಿಶಿಣ ಕುಂಕುಮ ತಾಂಬೂಲವನ್ನು ಕೊಟ್ಟಾಗ ಇಬ್ಬರೂ ಚಕಿತರಾದರು.

ಅವಳು ಹೊರಟುಹೋದ ಮೇಲೆ ಅವನು ಅತ್ತಿಗೆಯನ್ನು ಕೇಳಿದ.

"ಅತ್ತಿಗೆ ನಿಮಗೆ ಬೇಜಾರೇನಿಲ್ಲ ತಾನೆ ? ನನ್ನಿಂದ ತೊಂದರೆ ಅಂತ ಅನ್ನಿಸ್ತಿಲ್ಲವೇ ? ಏನೇನೋ ಫಜೀತಿಗಳನ್ನು ಮಾಡಿ ಬಿಡ್ತೀನಲ್ಲ"ಕೆಟ್ಟಮುಖ ಮಾಡಿದ.

"ಬೇಜಾರೇನಿಲ್ಲಪ್ಪ. ನಿನ್ನ ಸ್ನೇಹಿತೆ ನನಗೂ ಸ್ನೇಹಿತೆ. ನಿನ್ನ ಒಂಟಿತನವನ್ನು ಹೋಗಲಾಡಿಸಿದವಳು. ಅವಳು . ಇನ್ನಾದರೂ ನೀನು ಮನಸ್ಸು ಮಾಡಿ ಮದುವೆಗೆ ಒಪ್ಪುತ್ತೀಯೇನೋ ಅಂತ ನನ್ನ ಆಸೆ. ಬೇಕಾದರೆ ಇವಳನ್ನೇ ಮದುವೆಯಾಗು. ನಾನು ಮಾತಾಡ್ತೀನಿ. "

"ನನ್ನ ಮದುವೆ ಆಸೆ ನಿಮಗೇಕೆ ? ಇವಳಿಗೆ ಮದುವೆಯಾಗಿದೆ. ನನಗೇ ಆ ಆಸೆ ಇಲ್ಲ. ಇನ್ನು ಮುಂದೆ ಯಾವ ಅಚಾತುರ್ಯವೂ ನಡೆಯುವುದಿಲ್ಲ. "

"ಊಟದ ಹೊತ್ತಾಯ್ತು, ಅಡಿಗೇನೇ ಮುಗಿದಿಲ್ಲ" ಅವಳು ಹೊರಟಳು.

"ಅತ್ತಿಗೇ ಇವಳಿಗೆ ಮದುವೆಯಾಗಿದೆ. ಮತ್ತೆ ಹೇಳಿದ. "

"ಗೊತ್ತಾಯ್ತು , ಡೈವೋರ್ಸ್ ತಗೋಬಹುದಲ್ಲ. ಅವಳ ಗಂಡ ಡೈವೋರ್ಸ್ ಕೊಟ್ಟೆ ಕೊಡ್ತಾನೆ"ಎಂದು ಹೇಳಿ ಒಳಕ್ಕೆಹೋದಳು.

ಸ್ನೇಹದ ನೆಪದಲ್ಲಿ ತಾನೇಕೆ ಮತ್ತೆ ಅವಳನ್ನು ಕರೆಸಿದೆ ಎಂದು ಮತ್ತೆ ಮತ್ತೆ ಚಿಂತಿಸಿದರೂ, ಬರೀ ಅದಲ್ಲ ಎಂದು ಅವನ ಮನಸ್ಸು ಹೇಳತೊಡಗಿತು. ತಾನು ಅವಳ ಸಂಗವನ್ನು ಬಯಸುತ್ತಿದ್ದೇನೆಯೇ ಎಂದು ತನಗೆ ತಾನೇ ಪ್ರಶ್ನಿಸಿಕೊಂಡ. ಉತ್ತರವನ್ನು ಅವನ ಮನಸ್ಸೇ ಹೇಳಬೇಕಾಗಿತ್ತು.

ಅಣ್ಣ ತಮ್ಮ ಇಬ್ಬರೂಕುಳಿತು ಊಟ ಮಾಡಿದರು. ಅಣ್ಣ ಒಂದು ಗಳಿಗೆ ಮಲಗಿ ಎದ್ದು ಕಾಫಿ ಕುಡಿದು ಮತ್ತೆ ಕಾಲೇಜಿಗೆ ಹೊರಟ. ಗೀತ ಊಟ ಮಾಡಿ ಮುಗಿಸುವವರೆಗೂ ಅವನ ಎದುರಿಗೆ ಕುಳಿತಿದ್ದ ದಿನೇಶ. ನಂತರ ಎದ್ದು ಹೋಗಿ ತಾನೂ ಮಲಗಿದ.

* * * *

ಅಲಕಾ ತನ್ನಿಂದ ದೂರ ಹೋದಮೇಲೆ ತಾನು ಒಂಟಿಯಾಗಿ ಕಾಲ ಹಾಕಬೇಕು ಎಂದೇನೂ ಇರಲಿಲ್ಲ. ಅದು ತನಗೆ ತಾನೇ ಹಾಕಿಕೊಂಡ ನಿಬಂಧನೆ ಅಷ್ಟೇ. ಅವಳು ಎಲ್ಲಿದ್ದಾಳೋ, ಯಾರ ಜತೆಯಲ್ಲಿದ್ದಾಳೋ ... ಅವಳು ಮತ್ತೆ ವಾಪಸ್ಸು ಬರುವುದಂತೂ ಸಾಧ್ಯವಿಲ್ಲ. ಬಂದರೂ ತಾವಿಬ್ಬರೂ ಒಟ್ಟಿಗೆ ಸಂಸಾರ ನಡೆಸುವುದು ಸುಳ್ಳು. ಅದು ತಿಳಿದಿದ್ದೂ ತಾನೇಕೆ ಇಷ್ಟು ದಿನ ಹೀಗೆ ಕಾಲ ಹಾಕಿದೆ ? ಇವಳು ಮೊದಲೇ ಏಕೆ ಸಿಗಲಿಲ್ಲ!

ನನಗೆ ಒಂದು ತರಹ ಸಾಂಸಾರಿಕ ಆಸಕ್ತಿಯಲ್ಲಿ ಯಾವ ಸೊಗಸೂ ಕಂಡಿರಲಿಲ್ಲ. ಸಂಧ್ಯಾಳನ್ನು ಸಹ ಯಾವ ಕೆಟ್ಟ ಆಸೆಯಿಂದ ನೋಡಿರಲಿಲ್ಲ. ಆದರೆ ಈಗೇಕೆ ಹೀಗೆ ನ್ನಿಸುತ್ತಿದೆ? ಅವಳು ಬರಲಿ, ತನ್ನೊಡನೆ ಇರಲಿ ಎಂದು ನನ್ನ ಮನಸ್ಸು ಬಯಸುತ್ತಿದೆಯಲ್ಲ. ಇದು ತಪ್ಪಲ್ಲವೇ ? ಮದುವೆಯಾದ ಹೆಂಗಸು, ಯಾವುದೋ ಒಂದು ಆಸೆಗೆ ಒಳಗಾಗಿ ತನ್ನನ್ನೂ ಸೆಳೆದಿದಾಳೆ, ಆದರೆ ಅವಳ ಮನಸ್ಸಿನಲ್ಲಿ ಏನಿದೆಯೋ ? ಮಹಾಭಾರತವನ್ನು ಓದಿ, ತನಗೆ ಬೇಕಾದ ವಿಷಯದ ಬಗ್ಗೆ ಮಾತ್ರ ಗಮನಕೊಟ್ಟು ತನ್ನ ಕೆಲಸವನ್ನು ಸಾಧಿಸಿಕೊಂಡಳಲ್ಲ. ಅವಳ ಗಂಡನಿಗೆ ತಿಳಿದರೆ ? ಅಥವಾ ಎಲ್ಲವನ್ನೂ ತಿಳಿಸಿ ಅವನನ್ನು ಒಪ್ಪಿಸಿದರೆ ? ಆಗ ನನ್ನ ಸ್ಥಿತಿ ಏನು ? ಎಲ್ಲಿಂದ ಎಲ್ಲಿಗೆ ಬಂತು ನನ್ನ ಬದುಕು ? ಈ ಮುಂಚೆಯೇ ಎಲ್ಲವನ್ನೂ ಮರೆತು, ಬೇರೊಂದು ಮದುವೆಯಾಗಿದ್ದರೆ ಈ ದಿನ ಈ ಸ್ಥಿತಿಯನ್ನು ಕಾಣುವ ಪ್ರಸಂಗವೇ ಬರುತ್ತಿರಲಿಲ್ಲವೆಂದುಕೊಂಡ.

ಆ ರಾತ್ರಿಯೂ ಅಲ್ಲೇ ಉಳಿದು, ಮಾರನೇ ದಿನ ಅವನು ತನ್ನ ಎಸ್ಟೇಟಿಗೆ ಹೊರಟಾಗ ಗೀತ ಡಬ್ಬಿಗಳ ಭರ್ತಿ ಊಟ, ತಿಂಡಿ, ಮತ್ತೇನೆಲ್ಲವನ್ನೂ ತುಂಬಿಕೊಟ್ಟಳು.ಅತ್ತಿಗೆ ನಾನು ಏನೇನೆಲ್ಲ ಹೇಳಿ, ನಿಮಗೆ ತೊಂದರೆ ಕೊಟ್ಟೆನೇನೋ ಅಂತ ಅನ್ನಿಸ್ತಿದೆ''ಎಂದ ಮುಜುಗರದಿಂದ.

''ಹಾಗೆಲ್ಲಾ ತಿಳಿಯಬೇಡ. ನಿನ್ನ ದುಗುಡವನ್ನು ಹೇಳಿಕೊಳ್ಳಲು, ನಿನಗೆ ತಾನೇ ಇನ್ಯಾರಿದಾರೆ ? ನೀನೂ ಹೂಂ ಅನ್ನು. ನಾನು ಈಗಲೇ ಹೆಣ್ಣನ್ನು ಹುಡುಕಿ ನಿನ್ನ ಮದುವೆ ನೆರವೇರಿಸ್ತೀನಿ. ...ಇವಳು ಬೇಡವೇ ಬೇಡ. ... ಇವಳನ್ನು ಮರೆತುಬಿಡು.''

''ಆಗಲಿ, ನಿಧಾನವಾಗಿ ಯೋಚಿಸ್ಬಿಟ್ಟು ತಿಳಿಸ್ತೀನಿ.''

ಅವಳ ಹತ್ತಿರ ಏನು ಮಾತನಾಡಿದೆ ಎಂದು ಅವಳೂ ಕೇಳಲಿಲ್ಲ! ಇವನೂ ಹೇಳಲಿಲ್ಲ. ದಿನೇಶ ಚಿಕ್ಕವನಲ್ಲ, ಅವನಿಗೆ ಇಷ್ಟ ಬಂದಂತೆ ಬದುಕುವ ಹಕ್ಕು ಅವನಿಗಿದೆ. ನನಗೆ ತಿಳಿಸಿ ಎಲ್ಲವನ್ನೂ ಮಾಡಲಿ ಎನ್ನುವ ಸ್ವಾರ್ಥತನ ನನಗೇಕೆ ? ಅವನು ನನ್ನ ಸಲಹೆ, ಸಹಾಯ ಕೇಳಿದಾಗ ಮಾಡಿದರಾಯ್ತು ಎಂದುಕೊಂಡಿದ್ದಳು.

ಅವನು ಕಾರು ಹತ್ತಿ ಹೊರಟಾಗ, ಅವಳು ಕೈಯಾಡಿಸಿದಳು.

* * * *

ಮುಂದಿನ ಎರಡು ಮೂರು ದಿನಗಳು ಅವನು ಅವಳಿಗಾಗಿ ಕಾದ. ಅವಳು ಯಾಕೋ ಬಂದಿರಲಿಲ್ಲ. ಅವಳು ತನ್ನನ್ನು ಬಯಸಿದ್ದು ತಪ್ಪು ಎಂದು ಅವಳಿಗೆ ತಿಳುವಳಿಕೆ ನೀಡಿದ್ದ. ಈಗ ಅವಳನು ತಾನು ಆಶಿಸುವುದು ತಪ್ಪಲ್ಲವೆ ಎಂದು ತನಗೆ ತಾನೇ ಬಾರಿ ಬಾರಿಗೂ ಹೇಳಿಕೊಂಡರೂ ಅವಳು ತನ್ನ ಸ್ನೇಹವನ್ನು ಅಪೇಕ್ಷಿಸಿದಾಳೆ. ತಾನಾಗಿಯೇ ಏನೂ ಹೋಗಿರಲಿಲ್ಲವಲ್ಲ ಎಂದೂ ತನಗೆ ತಾನೇ ಸಮಾಧಾನ ಹೇಳಿಕೊಳ್ಳುತ್ತಿದ್ದ.

ಗಂಡನಿಂದ ಏನಾದರೂ ಅಡ್ಡಿ ಬಂದಿರಬಹುದೆ ? ಅಥವಾ ತನ್ನ ಮೇಲಿನ ಅಸಮಾಧಾನದಿಂದ ಇನ್ಯಾರ ಜತೆಯಲ್ಲಿಯಾದರೂ ಸ್ನೇಹಗಳಿಸಿರಬಹುದೆ ? ಅಥವಾ ಅವಳಿಗೆ ತನ್ನ ಅಗತ್ಯವಿಲ್ಲವೇನೋ ಅದಕ್ಕೇ ಬಂದಿರಲಾರಳು. ಹೋಗಲಿ ಒಳ್ಳೆಯದೇ ಆಯಿತು ಎಂದು ಸುಮ್ಮನಾಗಲು ಪ್ರಯತ್ನಿಸಿದ. ಒಂದುವಾರ ಕಳೆಯಿತು. ಆಗಾಗ್ಗೆ ಅವಳಿಗಾಗಿ ದಾರಿಕಾಯುವುದನ್ನು ಕಡಿಮೆ ಮಾಡಿದ. ಸಿಟಿಗೂ ಹೋಗದೇ ಮನೆಯಲ್ಲೇ ಇದ್ದವನು , ಮಗಳನ್ನು ನೋಡಿ ಬರುವ ನೆಪದಿಂದ ಸಿಟಿಯ ಕಡೆ ಹೊರಡಲು ತಯಾರಾದ. ಕಾರಿನಲ್ಲಿ ಕುಳಿತು ಗೇಟನ್ನು ದಾಟುವಾಗ ಯಾರೋ ತನ್ನ ಮನೆಯ ಕಡೆಗೇ ಬರುತ್ತಿರುವುದನ್ನು ಗಮನಿಸಿದ. ಕಾರನ್ನು ಹಿಂದಕ್ಕೇ ತಂದು ನಿಲ್ಲಿಸಿ ಆ ವ್ಯಕ್ತಿಗಾಗಿ ಕಾದ. ಗೇಟಿನ ಹತ್ತಿರ ಅವಳು ತಿರುಗುತ್ತಿದ್ದಂತೆಯೇ ಹೌದೋ ಅಲ್ಲವೋ ಎಂಬಂತೆ ಮತ್ತೆ ಮತ್ತೆ ಪರೀಕ್ಷಿಸಿ ನೋಡಿದ. ಹೌದು ಅವಳೇ... ಸಂಧ್ಯಾ. ತನಗಾಗಿಯೇ ಬರುತ್ತಿದ್ದಾಳೆ ಅಂತೆ ಎನಿಸಿದಾಗ ಅವನಿಗೆ ಕುಣಿಯಬೇಕು ಎನ್ನುವಷ್ಟು ಸಂತೋಷವಾಯಿತು. ಯಾವ ಅಂಜಿಕೆಯೂ ಇಲ್ಲದೆ ಅವಳ ಬಳಿಗೆ ಕಾರನ್ನು ತಂದು ನಿಲ್ಲಿಸಿದ.

ಕಿಟಕಿಯಿಂದಾಚೆ ಕೈ ನೀಡಿ "ಹಲೋ, ಸಂಧ್ಯಾ"ಎಂದ. ಅವಳು ಮುಗುಳ್ನಕ್ಕಳು. ಅವಳೂ ಕೈ ನೀಡಿದಳು. ಇವನು ಕೈಕುಲುಕಿದ ತನ್ನ ಬರುವಿಗಾಗಿ ಅವನು ಕಾಯುತ್ತಿದ್ದ ಎಂದು ಅವಳಿಗೆ ತಿಳಿದುಹೋಯಿತು. ಗೆಲುವಿನಿಂದ ಅವನನ್ನೇ ನೋಡಿದಳು. ಇಬ್ಬರೂ ಒಟ್ಟಿಗೇ ಮನೆಗೆ ಬಂದರು.

ಮುಂದಿನ ಎಷ್ಟೋ ಗಂಟೆಗಳು ಇಬ್ಬರೂ ಎದುರೆದುರು ಕುಳಿತು ಸಾಕಾದಷ್ಟು ಮಾತನ್ನಾಡಿದರು. ಅವನು ಕಾಫಿ, ಬಿಸ್ಕತ್ತನ್ನು ತಂದಿತ್ತ. ಇಬ್ಬರೂ ಒಟ್ಟಿಗೆ ಕೂತು ಕಾಫಿಯನ್ನು ಕುಡಿದರು. ನಿಧಾನವಾಗಿ ಸಾಯಂಕಾಲವಾಗತೊಡಗಿತು. ಅವಳು ಇನ್ನೇನು ಹೊರಟೇ ಬಿಡುವಳೋ ಎಂದು ಉದ್ವೇಗಗೊಂಡ. ಆದರೆ ಅವಳು ಹೊರಡುವ ಮಾತನ್ನೇ ಆಡಲಿಲ್ಲ. ಕಡೆಗೂ ತಡೆದು ಕೇಳಿದ.

"ನಾನು ಸಿಟಿಗೆ ಹೊರಟಿದ್ದೆ. ನಿಮ್ಮನ್ನು ನಿಮ್ಮ ಮನೆ ಹತ್ತಿರ ಡ್ರಾಪ್ ಮಾಡ್ತೀನಿ. ಹೊತ್ತಾಗ್ತಲಿಲ್ವಾ ?"

"ನನ್ನನ್ನಾಗಲೇ ಕಳಿಸುವ ಆತುರವೆ ? ಎಷ್ಟೋ ದಿನಗಳ ನಂತರ ಬಂದಿದೀನಿ. ನಾನು ಇರಲಿ ಎಂದು ನಿಮಗೆ ಆಸೆ ಆಗುತ್ತಿಲ್ಲವೇ ?" ಓರೆ ನೋಟವನ್ನು ಬೀರಿದಳು.

ಅವನು ಬೆಪ್ಪನಂತೆ ಅವಳನ್ನೇ ನೋಡಿದ. ಅವಳೇ ಅವನ ಸನಿಹ ಬಂದು ಕುಳಿತು ನುಡಿದಳು. "ನಾನು ಈ ರಾತ್ರಿ ಇಲ್ಲೇ ಇರುವ ಆಸೆಯಿಂದ ಬಂದಿದೀನಿ. ನಿಮಗೆ ತೊಂದರೆ ಏನಿಲ್ಲವಲ್ಲ." ಕಿಲಕಿಲನೆ ನಕ್ಕಳು.

"ಹೌದಾ ? "ಎಂದು ಬೆರಗಾಗಿ ಕೇಳಿದ.

"ಹೌದು. ನನ್ನ ಅಭಿಲಾಷೆ ಪೂರೈಸುವವರೆಗೆ, ಆಗಾಗ್ಗ ನಾನು ಬರುವವಳೇ.... ನಿಜ ಹೇಳಿ ದಿನೇಶ್.... ನಾನು ಬರಲಿ ಎಂದು ನನಗಾಗಿ ಪರಿತಪಿಸಿದವರು ನೀವು ಈಗ ನಾನು ಹೋಗಲಿ ಅಂತ ಕಾಯುತ್ತಾ ಇದೀರಾ ? ನಿಜಹೇಳಿ."

"ನಿಮಗಾಗಿ ನಾನು ಕಾದಿದ್ದು ನಿಜ. ... ಆದರೆ ಅಲ್ಲಿ ನಿಮಗಾಗಿ ನಿಮ್ಮ ಗಂಡ ಕಾಯುತ್ತಿರಬಹುದಲ್ಲವೇ !" ಅದೂ ಮುಖ್ಯ ಅಲ್ಲವೇ ?

"ಆ ಚಿಂತೆ ನಿಮಗೆ ಬೇಡ. ಈ ರಾತ್ರಿ ನಾನು ಇಲ್ಲಿರಲು ನಿರ್ಧರಿಸಿ ಬಂದಿದೀನಿ... ನಮಗೆ ಯಾರ ಚಿಂತೆಯೂ ಬೇಡ."

ಅವನ ಬೆರಗಿನ ಕಣ್ಣುಗಳನ್ನು ನೋಡಿ ಅವಳು ಮತ್ತೆ ನಕ್ಕಳು.

"ಹೆಂಗಸಾದ ನನಗೇ ಯಾವ ಆತಂಕವೂ ಇಲ್ಲದಿರವಾಗ ನಿಮಗೇಕೆ ಈ ಚಿಂತೆ ! ನೀವು ಹೇಗೆ ಇದ್ದರೂ ನಿಮ್ಮನ್ನು ವಿರೋಧಿಸುವವರು, ನಿಮಗೆ ತಿಳುವಳಿಕೆ ಹೇಳುವವರು ಯಾರಿಲ್ಲ, ನಿಮ್ಮ ಅತ್ತಿಗೆಯೇ ನಿಮ್ಮ ಕಡೆಗೆ ಇರುವಾಗ ನಿಮಗೆ ಭಯವೇಕೆ ?"

"ನಾನು ಬೆಳೆದು ಬಂದಿರುವ ರೀತಿಯೇ ಹಾಗೆ."

ಎಲ್ಲರೂ ಚಿಕ್ಕವಯಸ್ಸಿನಲ್ಲಿ ಬೆಳೆಯುವ ರೀತಿಯೇ ಹಾಗೆ. ಬೆಳೆದು ದೊಡ್ಡವರಾಗುತ್ತಿದ್ದಂತೆ, ಸ್ವಂತ ಆಲೋಚನೆಗಳು ಹೆಚ್ಚಿದಂತೆಲ್ಲಾ ಅವರ ನಡೆ ನುಡಿಗಳಲ್ಲೂ ಬದಲಾವಣೆಗಳು ಕಾಣುತ್ತವೆ. ಇದಕ್ಕೆ ಮನೆ, ಸಮಾಜ, ಪರಿಸರವೂ ಕಾರಣವಾಗುತ್ತದೆ. ಯಾರೊಬ್ಬನೂ ತಾನು ಹೀಗೇ ಇರಬೇಕು ಅಂತ ಎಂದುಕೊಂಡರೆ ಹಾಗೇ ಇರಲು ಸಾಧ್ಯವಿಲ್ಲ, ಎದುರಾಗುವ ಸಮಸ್ಯೆಗಳಿಗೆ ಬಾಗಲೇ ಬೇಕಾಗುತ್ತದೆ. ಸೋಲನ್ನು ಒಪ್ಪುವವರು ನಿಮ್ಮಂತೆ ಹೆದರುತ್ತಾರೆ. ಸೋಲನ್ನು ಒಪ್ಪದಿರುವ ನನ್ನಂತಹವರು, ಯಾವುದನ್ನೂ ಆಡುವುದಿಲ್ಲ."

"ಜನಾಪವಾದಕ್ಕೆ ಹೆದರುವುದಿಲ್ಲವೆ ? ಎಷ್ಟು ಸುಲಭವಾಗಿ ಹೇಳ್ತೀರಲ್ಲ."

"ಜನ ಹೇಗಿದ್ದರೂ, ಆಡಿಯೇ ಆಡಿಕೊಳ್ಳುತ್ತಾರೆ. ನೀವು ಇಲ್ಲಿ ಒಂಟಿಯಾಗಿರುವುದನ್ನು ಕುರಿತು ನಿಮ್ಮ ನೆಂಟರಿಷ್ಟರು ಆಡಿಕೊಂಡಿಲ್ಲ ಅಂತ ಹೇಗೆ ಹೇಳ್ತೀರಿ ?"

"ಏನೋ ನಾನು ಅದರ ಬಗ್ಗೆ ಎಂದೂ ಯೋಚಿಸಿಲ್ಲ. ನನ್ನ ಅತ್ತಿಗೆ ಸಹ ಎಂದೂ ಏನೂ ಹೇಳಿಲ್ಲ. ಒಂದು ವೇಳೆ ನನ್ನ ಹಿಂದೆ ಏನೇ ಮಾತುಗಳು ಬಂದಿದ್ದರೂ, ನನಗೆ ಬೇಜಾರಾಗಬಾರದೆಂದು ಅವರು ನನಗೆ ಏನನ್ನೂ ತಿಳಿಸುವುದಿಲ್ಲ. "

"ನಿಮ್ಮ ಅತ್ತಿಗೆ ಒಳ್ಳೆಯವರು. ನಿಮಗಾಗಿ ಒದ್ದಾಡುತ್ತಾರೆ. ನನಗೆ ಅಂತಹ ಆಪ್ತರು ಯಾರಿಲ್ಲ. ನನ್ನ ಗಂಡನಿದ್ದೂ ನಾನು ಏಕಾಂಗಿ. ಆ ಕಾರಣದಿಂದಲೇ ನನ್ನದೇ ಆದ ಒಂದು ಮಗು ನನಗೆ ಬೇಕು ಎಂದು ಹಂಬಲಿಸಿರುವುದು. ಯಾವುದೋ ಮಗುವನ್ನು ಸಾಕಿಕೊಳ್ಳುವ ವಿಷಯದಲ್ಲಿ ನನಗೆ ಆಸಕ್ತಿ ಇಲ್ಲ. ನನ್ನದೇ ಆದ ನನ್ನ ಸ್ವಂತ ಮಗು ಬೇಕು... ಒಂದೊಂದು ದಿನವೂ ಅದು ನನ್ನದಾಗಿ ನನ್ನ ಒಡಲಲ್ಲಿ ಬೆಳೆಯಬೇಕು. ನನ್ನ ರಕ್ತ ಮಾಂಸಗಳನ್ನು ಹಂಚಿಕೊಂಡು ಹುಟ್ಟಬೇಕು."

"ಆ ಮಗುವನ್ನು ನಿಮ್ಮವರು ತಮ್ಮದಲ್ಲವೆಂದು ನಿರಾಕರಿಸಿದರೆ ?"

"ಹಾಗೆ ಆಗಲು ಸಾಧ್ಯವಿಲ್ಲ. ಯಾವುದೋ ಮಗುವನ್ನು ಸಾಕಿಕೊಳ್ಳುವ ಅಭಿಲಾಷೆಯುಳ್ಳವರು, ನನ್ನ ಮಗುವನ್ನು ತನ್ನದೇ ಎಂದು ಭಾವಿಸಬಹುದು. ನಾನು ಒಪ್ಪಿಸ್ತೀನಿ. "

"ಆದರ ಸಾಧ್ಯತೆ ಕಡಿಮೆ" ಎಂದು ಹೇಳಬೇಕೆಂದುಕೊಂಡನು. ಅವಳ ಯೋಚನೆಯ ದಾರಿಯೇ ಬೇರೆ ಇದೆ ಎಂದು ಮನಗಂಡು ಸುಮ್ಮನಾದ.

ಆ ರಾತ್ರಿ ಅವಳು ಅಲ್ಲಿಯೇ ಉಳಿದಳು. ಎಷ್ಟೋ ಹೊತ್ತಿನವರೆಗೂ ಸುಮ್ಮನಿದ್ದ ಅವಳು ಅವನ ಸಂಯಮವನ್ನು ಮುರಿಯಲು ಕಾರಣಳಾದಳು. ನನಗೆಲ್ಲ ತಿಳಿಯುತ್ತೆ. ನಿಮ್ಮ ಮನಸ್ಸಿನಲ್ಲಿರುವುದೇ ಬೇರೆ. ಆಡುವುದೇ ಬೇರೆ. ಬರೀ ಬೂಟಾಟಿಕೆ ಎಂದು ಹೀಯಾಳಿಸಿ ತನ್ನ ಮಾತು ಕತೆಗಳಿಂದ ಸಹಜವಾಗಿ ಅವನನ್ನು ಉತ್ತೇಜನಗೊಳಿಸಿ ತನ್ನ ಕಾರ್ಯವನ್ನು ಈಡೇರಿಸಿಕೊಳ್ಳುವುದರಲ್ಲಿ ಸಫಲಳಾದಳು. ತನ್ನಿಂದ ಅವಳಿಗೆ ಉಪಕಾರವಾಗಲಿದೆ ಎಂಬ ಮನೋಭಾವನೆಯಿಂದ ಅವನು ಅವಳನ್ನು ಸಂತುಷ್ಟಗೊಳಿಸಿದ. ಕೃತಾರ್ಥಳಾದೆ ಎಂಬ ಭಾವನೆಯಿಂದ ಅವಳು ಅವನೊಡನೆ ನಲಿದಳು. ಬೇರೆ ಯಾವ ಆಲೋಚನೆಯೂ ಅವಳಿಗೆ ಬರಲಿಲ್ಲ.

ರಾತ್ರಿ ಕಳೆದು ಬೆಳಗಾಯಿತು. ಅವಳು ವಾಪಸ್ಸುಹೋಗುವ ಸೂಚನೆಯನ್ನೇ ವ್ಯಕ್ತಪಡಿಸಲಿಲ್ಲ. ಎಷ್ಟೋ ಹೊತ್ತಿನ ನಂತರ ಹೇಳಿದಳು.

"ನನ್ನ ಗಂಡ ಟೂರ್ ಹೋಗಿದಾರೆ. ನಾನು ಮೂರು ನಾಲ್ಕು ದಿನ ಇಲ್ಲೇ ಇದ್ದರೆ ನಿಮಗೆ ತೊಂದರೆ ಏನಿಲ್ಲ ತಾನೇ ! ನಾನು ಒಂದು ಸೆಟ್ ಬಟ್ಟೆಗಳನ್ನು ತಂದಿದೀನಿ" ಎಂದಳು.

ಏನು ಆಡಿದರೆ, ಏನು ಹೇಳುವಳೋ ಎಂದುಕೊಂಡು ಅವಳನ್ನೇ ಸುಮ್ಮನೇ ನೋಡಿದ. ಅವನ ಕಣ್ಣುಗಳಲ್ಲಿ ಯಾವ ಆಸೆಯೂ ಇಲ್ಲದ್ದನ್ನು ಗಮನಿಸಿ ಅವಳು ನಿರಾಶಳಾದಳು. ಎದುರಿಗೆ ನಿಂತ ಹೆಣ್ಣಿನ ಬಗ್ಗೆ ಆಸಕ್ತಿ ತೋರದಿರುವ ಇವನೆಂತಹ ಗಂಡಸು ! ಅದಕ್ಕೇ ಇವನ ಹೆಂಡತಿ ಯಾರ ಹಿಂದೆಯೋ ಓಡಿ ಹೋಗಿರಬೇಕು ಎಂದುಕೊಂಡರೂ, ತನ್ನ ಕಾರ್ಯ ಸಫಲವಾಗುವವರೆಗೂ ತಾನು ಇಲ್ಲಿರುವುದು ಅಷ್ಟೇ... ಆಮೇಲೆ ತನಗೆ ಇವನ

ಸಹವಾಸವೇಕೆ ! ನಿಯೋಗದ ನಿಯಮವೂ ಇದೇ ಅಲ್ಲವೆ ? ಅದನ್ನ ಪಾಲಿಸಿದರಾಯ್ತು ಎಂದುಕೊಂಡಳು.

ಆ ಹಿಂದೆ ಅವನ ಜತೆ ಕಳೆದ ಆದಿನ ನೆನಪಿಗೆ ಬಂತು. ಆ ದಿನಗಳಲ್ಲೇ ತಾನು ಗರ್ಭಿಣಿಯಾಗಿದ್ದರೆ, ಖಂಡಿತಾ ತಾನು ಮತ್ತೆ ಬರುತ್ತಿರಲಿಲ್ಲ. ಆದ್ದರಿಂದಲೇ ಈ ಸಾರಿ ಒಟ್ಟಿಗೇ ಮೂರು ನಾಲ್ಕು ದಿನಗಳನ್ನು ಅವನೊಡನೆ ಕಳೆಯುವ ಉದ್ದೇಶದಿಂದ ಬಂದಿದ್ದಳು. ಈ ಸಾರಿ ತನ್ನ ಇಚ್ಛೆ ಖಂಡಿತವಾಗಿ ಪೂರೈಸುತ್ತದೆ. ನಂತರ ತನಗೆ ಇವನ ಅವಶ್ಯಕತೆ ಇರುವುದಿಲ್ಲ ಎಂದುಕೊಂಡು ತನ್ನಲ್ಲೇ ನಕ್ಕಳು.

ಈ ಬಗ್ಗೆ ಅನುಮಾನವಿಲ್ಲದೇ, ಅವನು ಮೋಡಿಗೊಳಗಾದವನಂತೆ ಅವಳು ಹೇಳಿದಂತೆ ಕೇಳಿದ, ವರ್ತಿಸಿದ. ಆ ಮೂರು ದಿನ ಮೂರು ರಾತ್ರಿಗಳನ್ನು ಅವಳು ತನ್ನ ಇಷ್ಟದಂತೆ ಕಳೆದಳು. ಅವನು ಮಾತ್ರ ತನ್ನ ದಿನ ನಿತ್ಯದ ಕೆಲಸ ಕಾರ್ಯಗಳನ್ನು ಮುಂಚಿನಂತೆಯೇ ನಿರ್ವಹಿಸಿದ. ಮನೆಗೆ ಬಂದ ಒಬ್ಬ ಅತಿಥಿಯನ್ನು ಸತ್ಕರಿಸುವಂತೆ ಅವಳಿಗೆ ಕಾಫಿ,ತಿಂಡಿ, ಊಟ ಇತ್ಯಾದಿಗಳನ್ನು ಕೊಟ್ಟು ಉಪಚರಿಸಿದ. ಅವಳು ಯಾವ ಸಂಕೋಚವೂ ಇಲ್ಲದೇ ತನ್ನ ಇಷ್ಟ ಬಂದಂತೆ ವರ್ತಿಸಿದಳು. ಅವನು ಯಾವುದನ್ನೂ ವಿರೋಧಿಸಲಿಲ್ಲ.

ಮೂರು ನಾಲ್ಕು ದಿನಗಳ ನಂತರ ಅವಳು ಹೊರಡುವೆನು ಎಂದಾಗ ಅವನು ಮುಖ ಚಿಕ್ಕದು ಮಾಡಿಕೊಂಡ. ತನ್ನ ಚೈತನ್ಯವೆಲ್ಲ ಅವಳ ಹಿಂದೆಯೇ ಹೊರಟು ಹೋಗುತ್ತಿದೆ ಯೇನೋ ಅಂತ ಅನ್ನಿಸಿತು. "ಆಗಾಗ್ಗೆ ಬರುತ್ತಿರಿ" ಎಂದ. "ಇಲ್ಲೇ ಇರಿ" ಎಂದು ಹೇಳುವ ಧೈರ್ಯವಿಲ್ಲ ಎಂದು ನಕ್ಕಳು. ಆದರೂ ತನ್ನ ಸಾಂಗತ್ಯವನ್ನು ಬಯಸಿದ್ದಾನೆ ಎಂದು ಅರಿತಳು.

"ನೋಡೋಣ. ಅಗತ್ಯಬಿದ್ದರೆ ಖಂಡಿತಾ ಬರ್ತೀನಿ. ಎಂದಳು. ಅವಳ ಇಂಗಿತ ಅವನಿಗೆ ಅರ್ಥವಾಗಿತ್ತು. ಇಲ್ಲೇ ಇರು" ಎಂದು ಅವಳನ್ನು ಬಲವಂತ ಮಾಡುವುದು ತನ್ನಿಂದ ಖಂಡಿತಾ ಸಾಧ್ಯವಿಲ್ಲ ಎಂದು ಅವನಿಗೆ ತಿಳಿದಿತ್ತು.ಅವಳನ್ನು ಬಿಟ್ಟು ಬರಲು ತಾನೂ ಸಿದ್ಧನಾದ.

ಕಾರಿನಿಂದ ಇಳಿದ ಅವಳು 'ಥ್ಯಾಂಕ್ಸ್' ಎಂದಷ್ಟೇ ಹೇಳಿ ಹೊರಟಾಗ, ತಡೆದು ನಿಲ್ಲಿಸುವ ಮನಸ್ಸಾದರೂ ತಡೆದುಕೊಂಡ. ಅವಳು ಪರಸ್ತ್ರೀ ಎಂಬ ಭಾವನೆ ಅವನಲ್ಲಿ ಇದ್ದೇ ಇತ್ತು. ಮನಸ್ಸಿನಲ್ಲಿರುವ ಆಸೆಯನ್ನು ಹೊರಗೆಡವದಂತೆ ತಡೆದುಕೊಂಡಿರುವ ಅವನ ಶಕ್ತಿಯನ್ನು ಮೆಚ್ಚಿದರೂ,ಒಂದು ಗಳಿಗೆ ಮನಸ್ಸಿಗೆ ಪಿಚ್ಚೆನಿಸಿತು. ಅವನೆಡೆ ನೋಡುವ ಮನಸ್ಸಾಗದೇ ಮುಂದೆ ಮುಂದೆ ನಡೆದಳು. ಕಾರು ಹಿಂತಿರುಗಿದ ಸದ್ದು ಕೇಳಿದಾಗ ಮೆಲ್ಲನೆ ತಿರುಗಿ ನೋಡಿದಳು. ಅವನ ಗಮನ ರಸ್ತೆಯ ಕಡೆಗೆ ಇದ್ದುದನ್ನು ಗಮನಿಸಿ, ಬಿರಬಿರನೆ ಹೆಜ್ಜೆ ಹಾಕಿದಳು.

* * * *

ಆ ನಂತರ ಅನೇಕ ದಿನಗಳು ಕಳೆದು ಹೋದವು. ಅವಳು ಬಂದಿರಲೇ ಇಲ್ಲ. ಅವಳಿಗಾಗಿ ಕಾದು ಕುಳಿತುಕೊಳ್ಳುವ ಸಮಯವೂ ಅಲ್ಲ. ತೋಟದ ಅನೇಕ ಕೆಲಸಗಳು ಬಾಕಿ ಇದ್ದವು. ನೀರಿನ ಅನಾನುಕೂಲತೆ ಹೆಚ್ಚಿದ್ದರಿಂದ ಒಂದು ನೆಲಬಾವಿಯನ್ನು ತೋಡಿಸುವ ಕೆಲಸಕ್ಕೆ ಆಳುಗಳನ್ನು ಗೊತ್ತು ಮಾಡಿದ್ದ.

ಇದೇ ಸಮಯದಲ್ಲಿ ಅತ್ತಿಗೆಗೆ ಹುಶಾರಿಲ್ಲದೆ, ಅವಳನ್ನು ನರ್ಸಿಂಗ್ ಹೋಂಗೆ ಸೇರಿಸಿದ್ದರಿಂದ, ಅವನು ಕೆಲವು ದಿನಗಳ ಮಟ್ಟಿಗೆ ಅಣ್ಣನ ಮನೆಯಲ್ಲಿ ಇರಬೇಕಾಗಿ ಬಂತು. ಬೆಳಗಿನ ಹೊತ್ತು ಸ್ವಲ್ಪ ಹೊತ್ತು ಎಸ್ಟೇಟಿನ ಉಸ್ತುವಾರಿ ನೋಡಿಕೊಂಡು, ರಾತ್ರಿಯ ಹೊತ್ತು ಅಣ್ಣನ ಮನೆಗೆ ವಾಪಸ್ಸು ಬರುತ್ತಿದ್ದ.

ಅತ್ತಿಗೆಗೆ ಏನು ಸೀರಿಯಸ್ ಖಾಯಿಲೆಯೋ ಎಂಬ ಹೆದರಿಕೆಯಿಂದ ಆ ಬಗ್ಗೆ ಅಣ್ಣನನ್ನು ಕೇಳಲೇ ಇಲ್ಲ. ಅವಳಿಗೆ ಏನಾದರೂ ಆಗಿ ಹೋಗಿಬಿಟ್ಟರೆ ಈ ಮಕ್ಕಳು ಅನಾಥರಾಗಿಬಿಡ್ತಾರೆ ಎಂಬ ಚಿಂತೆ ಅವನನ್ನು ಬಾಧಿಸತೊಡಗಿತು. ತನಗಿಂತ ಹೆಚ್ಚಾಗಿ ಮುಖವನ್ನು ಕೆಡಿಸಿಕೊಂಡಿರುವ ತಮ್ಮನನ್ನು ಕಂಡು ಅಣ್ಣನೇ ಸಮಾಧಾನ ಹೇಳಿದ.

"ಏನೂ ತೊಂದರೆ ಇಲ್ಲ ಅಂತ ಡಾಕ್ಟರು ಹೇಳಿದಾರೆ. ಸ್ವಲ್ಪ ದಿನಗಳು ರೆಸ್ಟ್‌ನಲ್ಲಿದ್ದರೆ ಆಮೇಲೆ ಎಲ್ಲ ಸರಿಹೋಗುತ್ತೆ. ವಿಪರೀತ ಕೆಲಸ ಮಾಡ್ತಾಳೆ.ನೀನು ಸ್ವಲ್ಪದಿನ ಅವಳ ಜತೇಲಿದ್ದು ಅವಳಿಗೆ ಸಹಾಯ ಮಾಡಿಬಿಡು.ಬೇಗ ಚೇತರಿಸಿಕೊಳ್ತಾಳೆ."

"ಓ ಖಂಡಿತಾ" ಎಂದು ಆಶ್ವಾಸನೆ ನೀಡಿದ್ದ.

ಈ ಓಡಾಟ ತಿರುಗಾಟಗಳಲ್ಲಿ ಅವನು ಸಂಧ್ಯಾಳ ಬಗ್ಗೆ ಚಿಂತಿಸುವುದನ್ನು ಕಡಿಮೆ ಮಾಡಿದ್ದ. ಆದರೂ ಒಮ್ಮೊಮ್ಮೆ, ಅವಳೇನಾದರೂ ಎಸ್ಟೇಟಿಗೆ ಬಂದು ತನಗಾಗಿ ಕಾದು ನಿರಾಶಳಾಗಿ ಹೋಗಿಬಿಡುವಳೇನೋ ಎನಿಸಿದಾಗ ಮನಸ್ಸು ಮುದುಡಿ ಹೋಗುತ್ತಿತ್ತು. ಅವಳ ಬಗ್ಗೆ ಆಸಕ್ತಿ ಮೂಡುತ್ತಿದೆ ಎಂಬ ಅರಿವಾಗುತ್ತಿತ್ತು. ಅನುಭವಗಳು ನೆನಪಾಗುತ್ತಿದ್ದವು.

ಗೀತ ಮನೆಗೆ ಬಂದು ನಿಧಾನವಾಗಿ ಸುಧಾರಿಸಿಕೊಂಡಳು. ದಿನೇಶ ಅಣ್ಣ ಅತ್ತಿಗೆಗೆ ತುಂಬಾ ಸಹಾಯ ಮಾಡಿದ. ಮಕ್ಕಳು ಚಿಕ್ಕವರಾದ್ದರಿಂದ,ಎಲ್ಲಾ ಜವಾಬ್ದಾರಿಗಳೂ ಅವನ ಮೇಲೆ. ಯಾವ ಬೇಸರವನ್ನೂ ತೋರದೇ ಕೆಲಸಗಳನ್ನು ಮಾಡುತ್ತಿದ್ದ.

"ನೀನೂ ಮದುವೆಯಾಗಿದ್ದಿದ್ದರೆ ಎಷ್ಟು ಚೆನ್ನಾಗಿತ್ತು ನೋಡು . ನಿನ್ನ ಹೆಂಡತಿ ನನಗೂಸಹಾಯ ಮಾಡಿರುತ್ತಿದ್ದಳು. ನಿನಗೂ ತೊಂದರೆಯಿರಲಿಲ್ಲ."

"ನಿಮಗೋಸ್ಕರ ಎಷ್ಟು ತೊಂದರೆ ಬೇಕಾದರೂ ಸಹಿಸಿಕೊಳ್ತೀನಿ" ಎಂದ.

"ಅದು ಸರಿ. ನನ್ನ ಸೇವೆ ಮಾಡ್ತಾ ನಿನ್ನ ಎಸ್ಟೇಟಿನ ಕೆಲಸ ಕಾರ್ಯಗಳೆಲ್ಲ ಅರ್ಧಕ್ಕೇ ನಿಂತು ಹೋಗಿದೆಯಲ್ಲ. ಆಳುಗಳನ್ನು ಹೆಚ್ಚು ನಂಬಬಾರದು."

"ಪರವಾಗಿಲ್ಲ ನಿಧಾನವಾಗಿ ಆಗುತ್ತೆ ಬಿಡಿ" ಎಂದಿದ್ದರೂ ತಾನುಒಂದು ಸಲ ಅಲ್ಲಿಗೆ ಹೋಗಿ ಬರಬೇಕೆನಿಸಿತ್ತು. "ಭಾನುವಾರ ಅಣ್ಣನಿಗೆ ರಜ, ನಾನು ಒಂದು ದಿನದ ಮಟ್ಟಿಗೆ ಹೋಗಿ ಬರ್ತೀನಿ"ಎಂದಿದ್ದ.

* * * *

ಮನೆಗೆ ಬಂದವನೇ ಮೊದಲು ಕಾಗದ ಪತ್ರಗಳನ್ನು ನೋಡಿದ. ಯಾರಾದರೂ ಬಂದಿದ್ದರೆ ? ಎಂದು ವಾಚ್‌ಮನ್‌ನ ಕೇಳಿದ್ದ. ಅವನು ಇಲ್ಲ ಅಂತ ಅಂದಿದ್ದ. ಸ್ವಲ್ಪ ನಿರಾಶೆಯಾದರೂ ಅಗತ್ಯವಿದ್ದಿದ್ದರೆ ಬರುತ್ತಿದ್ದಳು. ಇನ್ನು ತನ್ನ ಅವಶ್ಯಕತೆ ಅವಳಿಗಿಲ್ಲವೆಂದು ತೋರುತ್ತೆ ಅಂತ ಎಂದುಕೊಂಡ. ಗರ್ಭಿಣಿ ಒಂದು ಕ್ಷಣ ಮೈಯಲ್ಲೆಲ್ಲಾ ಏನೋ ಒಂದು ಹೊಸತನದ ಅನುಭವ ತುಂಬಿಕೊಂಡಂತಾಯಿತು. ಹಾಗೇನಾದರೂ ಇರಬಹುದೆ ? ಅವಳು ಒಂದು ಸಲ, ಒಂದೇ ಒಂದುಸಲ ಬಂದು, ತಮ್ಮಿಬ್ಬರ ಮಿಲನ ಸಫಲಗೊಂಡಿದೆ ಎಂದು ತಿಳಿಸಿದರೆ ಅಷ್ಟೇ ಸಾಕು. ಅಷ್ಟೇ ಸಾಕೆ ? ಇಲ್ಲ ತಮ್ಮಿಬ್ಬರ ಸಂಬಂಧ ಅಷ್ಟೇ ಅಲ್ಲ, ತಾನು ಅವಳನ್ನು ಪ್ರೀತಿಸುತ್ತಿದ್ದೇನೆ ಎಂದು ಅರಿವಾಗಲು ತಡವಾಗಲಿಲ್ಲ.

ಹೌದು ! ಅವಳನ್ನು ಪ್ರೀತಿಸುತ್ತಿದ್ದೇನೆ ಎಂದು ಅರಿವಿನೊಂದಿಗೆ ಏನೋ ಒಂದು ತರಹದ ಸಂತೋಷವಾಯಿತು. ತಾನು ಅವಳನ್ನು ಭೇಟಿಯಾಗಬೇಕು. ಅವಳೊಡನೆ ಮಾತನಾಡಬೇಕು ಎಂಬ ತವಕ ಪ್ರಾರಂಭವಾಯಿತು. ತನ್ನ ಮಗು ಅವಳ ಗರ್ಭದಲ್ಲಿ ಬೆಳೆಯುತ್ತಿದೆ ಎಂದು ಗೊತ್ತಾಗಬೇಕು. ಆದರೆ ಹೇಗೆ ? ತಾನುಅವಳ ಮನೆಗೆ ಹೋಗುವಂತಿಲ್ಲ, ಅವಳಾಗಿಯೇ ಇನ್ನು ಬರುತ್ತಾಳೋ ಇಲ್ಲವೋ... ಅತ್ತಿಗೆ ಹೋಗಿ ಬರುವ ಮಾತು ಸದ್ಯಕ್ಕಂತೂ ಇಲ್ಲ... ಹಾಗಾದರೆ , ತಾನು ತನ್ನ ಪ್ರೀತಿಯನ್ನು ಅವಳಿಗೆ ತಿಳಿಸುವುದಾದರೂ ಹೇಗ ? ಅವಳು ತಿಳಿದು ಏನು ಮಾಡುತ್ತಾಳೆ ! ಅವಳಿಗೆ ನನ್ನ ಮೇಲೆ ಇರುವುದು ಪ್ರೀತಿಯಲ್ಲ . ಬರೀ ತನ್ನ ಕಾರ್ಯ ಸಾಧನೆಗಾಗಿ ನನ್ನನ್ನು ಬಳಸಿಕೊಂಡಿದಾಳೆ... ಆದರೆ ಅವಳ ಒಡಲಲ್ಲಿ ಕಂದ ಬೆಳೆಯುತ್ತಿದ್ದರೆ ಅದು ನನ್ನದೇ .... ನನ್ನದೇ" ಸ್ವಲ್ಪ ಜೋರಾಗಿಯೇ ತನಗೆ ತಾನೇ ಹೇಳಿಕೊಂಡ.

ಸರಸರನೆ, ಅಗತ್ಯವಾದ ಕೆಲಸಗಳನ್ನು ಪೂರೈಸಿ ಮತ್ತೆ ಹೊರಟ. ಅತ್ತಿತ್ತ ನೋಡಿದ, ಅಂದಿನಂತೆ ಮತ್ತೆಲ್ಲಾದರೂ ಅವಳು ಕಾಣುವಳೋ ಎಂಬಂತೆ. ಅವಳ ಸುಳಿವಿಲ್ಲ, ಒಂದು ತರಹ ಮನಸ್ಸಿಗೆ ಮಂಕು ಕವಿಯಿತು ಎನಿಸಿತು. ಅವಳ ಗುಂಗಿನಲ್ಲೇ ಮುಳುಗಿಹೋದ. ಹೆಚ್ಚಿಗೆ ಮಾತನಾಡದೇ ತನ್ನ ಪಾಡಿಗೆ ತಾನು ಇದ್ದವನನ್ನು ಗೀತ ಗಮನಿಸಿದಳು. ಸುಮಾರು ಎರಡು ಮೂರು ವಾರಗಳಿಂದ ಇಲ್ಲಿಯೇ ಇದಾನೆ. ಅವನಿಗೆ ಬೇಸರವಾಗಿರಬಹುದೇನೋ ತನ್ನಿಂದ ಎಲ್ಲರಿಗೂ ಕಷ್ಟ ಅಂತ ಎಂದುಕೊಂಡಾಗ ಕಣ್ಣಲ್ಲಿ ನೀರು ತುಂಬಿಕೊಂಡಿತು. ಸ್ವಲ್ಪ ಸಮಾಧಾನ ಮಾಡಿಕೊಂಡು ನಂತರ ಕೇಳಿದಳು.

"ದಿನೇಶ ನೀನು ಏನೋ ಒಂದು ತರಹ ಇದೀಯ ? ಆರೋಗ್ಯವಾಗಿದೀಯ ತಾನೆ ? ಅಥವಾ ಏನಾದರೂ ಚಿಂತೇನಾ ?"

"ಹೂಂ ಹೂಂ ನನಗೇನಾಗಿದೆ ದಾಥಿ ? "ಎಂದು ನಗುತ್ತಾ.

"ಇಲ್ಲಪ್ಪ ಎಂದಿನಂತಿಲ್ಲ ನೀನು...... ಏನಾಯ್ತು! ಎಸ್ಟೇಟಿನಲ್ಲಿ ಎಲ್ಲಾ ಸರಿಯಾಗಿದೆ ತಾನೆ ? "

"ಹೂಂ, ಎಲ್ಲಾ ಸರಿಯಾಗಿದೆ. ಆದರೆ ಸದ್ಯಕ್ಕೆ ಅಲ್ಲಿಯ ಕೆಲಸಗಳನ್ನು ನಾನೇ ನಿಲ್ಲಿಸಿದೀನಿ. "

"ನನ್ನಿಂದ ನಿಮಗೆಲ್ಲ ಎಷ್ಟು ತೊಂದರೆ ಅಲ್ವಾ ?"

"ಏನತ್ತಿಗೆ ಹೀಗೆ ಹೇಳ್ತೀರಿ ? ನೀವು ಮೊದಲಿನಂತೆ ಆದರೆ ಸಾಕು. ಎಲ್ಲಾ ತಾನೇ ತಾನಾಗಿ ಸರಿ ಹೋಗುತ್ತೆ."

"ನನಗೇನಾಗಿದೆ ? ಡಾಕ್ಟರು ಹೇಳಿದರು ಅಂತ ರೆಸ್ಟ್‌ನಲ್ಲಿದೀನೀ.ಇಲ್ಲದಿದ್ದರೆ ನನ್ನ ಪಾಡಿಗೆ ನಾನು ಎದ್ದು ಓಡಾಡಬಹುದಾಗಿತ್ತು"

"ಡಾಕ್ಟರು ಏನಂದರು ? ಇದ್ದಕ್ಕಿದ್ದಂತೆ ಏನಾಯ್ತು ನಿಮಗೆ !"

"ಗೀತಳ ಮುಖ ಅರಕ್ತವಾಯಿತು. ನಾಚಿದಂತೆ ಕಂಡಿತು. ಅನುಮಾನಿಸುತ್ತಾ ನುಡಿದಳು. ಅಂಥದ್ದೇನಿಲ್ಲ.ಎಷ್ಟೋ ಹೆಂಗಸರಿಗೆ ಹೀಗಾಗುತ್ತೆ"

"ನನಗೆ ಅರ್ಥವಾಗಲಿಲ್ಲ. ಹೋಗಲಿಬಿಡಿ."

"ಏನಿಲ್ಲ, ಎಲ್ಲಾ ಸರಿಯಾಗಿದ್ದರೆ, ಮುಂದೆ ಆರೇಳು ತಿಂಗಳಿನಲ್ಲಿ ನೀನು ಮತ್ತೊಮ್ಮೆ ಚಿಕ್ಕಪ್ಪನಾಗುತ್ತಿದ್ದೆ..." ಕತ್ತು ತಗ್ಗಿಸಿ ನುಡಿದಾಗ, ಅವನಿಗೂ ಸಂಕೋಚವಾಯಿತು. ಆದರೂ "ಓ.... ಐ ಆಮ್‌ಸಾರಿ....." ಎಂದ ತಲೆ ಎತ್ತದೆ....

"ಆದರೆ ನಿನ್ನ ಅಣ್ಣನಿಗೆ ಬೇಜಾರಿರಬಹುದು.ಅವರಿಗೆ ಒಂದು ಗಂಡು ಮಗುವಾಗಲಿ ಅಂತ ಆಸೆ.....ಪಡ್ತಾರೆ. ಹಾಗಂತ ಆಗಾಗ್ಗೆ ಹೇಳುತ್ತಾರೆ."

"ಅವನಿಗೆ ಬುದ್ಧಿ ಇಲ್ಲ, ನಿಮ್ಮ ಆರೋಗ್ಯ ಮುಖ್ಯ. ಅವನ ಮಾತನ್ನು ಮನಸ್ಸಿಗೆ ಹಚ್ಚಿಕ್ಕೊಳ್ಳಬೇಡಿ..." ಅವನು ಸರಸರನೆ ಮುಡಿದಾಗ ಗೀತ ನಸುನಕ್ಕಿದ್ದಳು.

"ನನಗೆ ನಿನ್ನದೇ ಚಿಂತೆ. ಆ ಹೆಂಗಸಿನ ಪರಿಚಯವಾದಂದಿನಿಂದ ನೀನೂ ಸಹ ತಲೆ ಕೆಡಿಸಿಕೊಂಡಿದೀಯ ಅಂತ ನನಗನ್ನಿಸುತ್ತೆ. ಇದನ್ನೆಲ್ಲ ಮರೆತು ಮರು ಮದುವೆಯಾಗಿ ಆರಾಮವಾಗಿರಬಾರದಾ ?"

"ಏನೋ ನಂಗೊತ್ತಿಲ್ಲ. ಮರು ಮದುವೆ ಬಗ್ಗೆ ಯೋಚಿಸಿರಲೇ ಇಲ್ಲ ನಾನು. ಇದ್ದಕ್ಕಿದ್ದಂತೆ ಅನಿರೀಕ್ಷಿತವಾಗಿ ನನ್ನ ಬಾಳನ್ನು ಪ್ರವೇಶಿಸಿ, ಮನಸ್ಸಿನ ನೆಮ್ಮದಿಯನ್ನೇ ಹಾಳು ಮಾಡಿ ಬಿಟ್ಟಿದ್ದಾಳೆ, ಈ ಹೆಂಗಸು. ಒಮ್ಮೊಮ್ಮೆ ನೆನಪಿಗೆ ಬರ್ತಾಳೆ."

"ಅವಳು ಮದುವೆಯಾದವಳು. ಅವಳ ಸಹವಾಸವನ್ನು ಮೊಟಕು ಗೊಳಿಸಬೇಕಾಗಿತ್ತು ನೀನು"

"ಹೌದು, ಅವಳಾಗಿಯೇ ಮತ್ತೆ ಮತ್ತೆ ಬರದೇ ಇದ್ದಿದ್ದರೆ ನಾನು ಆರಾಮವಾಗಿರುತ್ತಿದ್ದೆ. ಆದರೆ ... ನಾನೀಗ ಅವಳಿಲ್ಲದೆ ಇರಲಾರೆ ಅಂತ ಹೇಳ್ಲಾರೆ. ಆದರೆ ನಾನು ಅವಳನ್ನು ಪ್ರೀತಿಸ್ತಿದೀನಿ ಅಂತ ಸಹ ಭಾಸವಾಗ್ತಿದೆ."

ಗೀತ ಒಂದು ಗಳಿಗೆ ಗಂಭೀರವಾದಳು. ಹೇಳಲೋ ಬೇಡವೋ ಅಂತ, ಅನುಮಾನಿಸಿ ನುಡಿದಳು. "ನಿನ್ನ ಮನಸ್ಸನ್ನು ಕೆಡಿಸಿ ನಿನ್ನನ್ನು ನೋಯಿಸುವ ಇಚ್ಛೆ ನನಗಿಲ್ಲ. ಆದರೂ ಹೇಳ್ತೀನಿ. ನೀನು ಮೆಚ್ಚಿ ಮದುವೆಯಾದ ಅಲಕಾ ನಿನ್ನನ್ನು ಪ್ರೀತಿಸಲಿಲ್ಲ. ಈಗ ನೀನು ಪ್ರೀತಿಸುತ್ತಿರುವ ಇವಳನ್ನು ನೀನು ಮದುವೆಯಾಗುವಂತಿಲ್ಲ. ನೀನು ಬುದ್ಧಿವಂತ. ತಿಳುವಳಿಕೆಯುಳ್ಳವನು. ಯಾವುದು ಸರಿ, ಯಾವುದು ತಪ್ಪು ಎಂದು ಆಲೋಚಿಸುವ ಶಕ್ತಿ ನಿನಗಿದೆ. ನಾನು ಏನು ಹೇಳಲಿ ? ಆದರೂ ದುಡುಕಬೇಡ, ನೆಮ್ಮದಿಗೆಡಬೇಡ."

"ನನಗೂ ಗೊತ್ತು. ಇಂತಹ ವಿಷಯದಲ್ಲಿ ಯಾರೂ ತಾನೇ ಸಲಹೆ ಕೊಡಲು ಸಾಧ್ಯ! ಆದರೂ ಒಂದು ಸಲ ಅವಳನ್ನು ಕಂಡು ನಾನು ಅವಳನ್ನು ಪ್ರೀತಿಸ್ತಿದೀನಿ ಅಂತ ಹೇಳಬೇಕು ಅಂತ ಅನ್ನಿಸ್ತಿದೆ. ಅದು ತಪ್ಪಾಗುತ್ತಾ ಅತ್ತಿಗೆ ? ಅವನು ಸ್ನೇಹಿತನಂತೆ ಕೇಳಿದರೂ ಅವನ ಅತಿರೇಕಕ್ಕೆ ಅವಳಿಗೆ ಅಯ್ಯೋ ಅಂತ ಎನಿಸಿತು. ಅವಳನ್ನು ತೆಗಳಿ ಅವನಲ್ಲಿರುವ ಭಾವನೆಯನ್ನು ಬದಲಾಯಿಸಬೇಕೆನ್ನಿಸಿತು."

"ನಾನು ಹೀಗೆ ಹೇಳ್ತೀನಂತ ಬೇಜಾರಾಗಬೇಡ. ಅವಳು ನಿನ್ನ ಪ್ರೀತಿಗೆ ತಕ್ಕವಳಲ್ಲ. ರೂಪ, ಗುಣ ಯಾವುದರಲ್ಲಿ ನಿನಗೆ ಸಮನಾಗಿದಾಳೆ ಹೇಳು ! ಏನೋ ಆಕಸ್ಮಿಕವಾಗಿ ನಿಮ್ಮ ಸ್ನೇಹವಾಗಿ ಈ ಸಂಬಂಧ ನಡೆದಿದೆ ಅಷ್ಟೇ. ಅದೂ ಕೂಡಾ ನ್ಯಾಯವಲ್ಲ. ಅದನ್ನೇ ಪ್ರೀತಿಅಂತ ಭಾವಿಸಬೇಡ. ನಾಲ್ಕುದಿನ ಕಳೆದರೆ ಎಲ್ಲಾ ಮರೆಯುತ್ತೆ.... ಸುಮ್ಮನಿದ್ದುಬಿಡು.

ಆ ಮಾತು ಅವನಿಗೆ ರುಚಿಸಲಿಲ್ಲ. ದಡಕ್ಕನೇ ಎದ್ದು ತನ್ನ ರೂಮಿಗೆ ಹೊರಟು ಹೋದ. ಗೀತಳಿಗೆ ಅದು ಅರ್ಥವಾದರೂ ಸುಮ್ಮನಾದಳು.

ರೂಮಿನಲ್ಲಿ ಅತ್ತಿಗೆ ಆಡಿದ ಮಾತುಗಳನ್ನೇ ಯೋಚಿಸುತ್ತಾ ಮಲಗಿದ. ಅವಳನ್ನೇ ನೆನೆಸಿಕೊಂಡ. ಅವಳು ರೂಪವಂತೆ ಅಲ್ಲ ಅಂತ ಅತ್ತಿಗೆ ಹೇಳಿರುವುದು ನಿಜವಲ್ಲ. ಅವಳು ಏಕೆ ಆ ಮಾತನ್ನಾಡಿದಾಳೆ ಅಂತ ನನಗೆ ತಿಳಿಯದೆ ! ಅಲಕಳಂತೆ ದಂತವರ್ಣದ ಮೈ ಬಣ್ಣ ಇವಳಿಗಿಲ್ಲದಿರಬಹುದು... ಅವಳಂತೆ ನಾಜೂಕಾದ ಬಳಕುವ ದೇಹ ಇವಳಿಗಿಲ್ಲದಿರ ಬಹುದು. ಅಲಕಾ ನಕ್ಕಾಗ ಕಾಣುವ ಕೆನ್ನೆಯ ಗುಳಿಗಳೊಳಗೆ ತಾನು ಬಿದ್ದಿರಲಿಲ್ಲವೇ ? ದುಂಡನೆಯ ಕೆನ್ನೆಗಳ ಸಂಧ್ಯಾ ಮುದ್ದಾಗಿ ಕಾಣುವುದಿಲ್ಲವೇ ? ಬಾಬ್ ಕೂದಲಿನ ಅಲಕಾ ಚೆಲ್ಲಾಟದ ಹುಡುಗಿಯಂತೆ ಕಂಡಿದ್ದರೆ, ನೀಳ ಜಡೆಯ ಸಂಧ್ಯಾ ಪ್ರೌಢ ಹೆಂಗಸಿನಂತೆ ಕಾಣುತ್ತಾಳೆ. ಬಗೆಬಗೆಯ ಅಲಂಕಾರ ಸಾಮಗ್ರಿಗಳ ಒಡತಿಯಾದ ಅಲಕಾಳಿಗೆ ತಾನು ಅಲಂಕರಿಸಿಕೊಂಡು ಮೆರೆಯಬೇಕು ಎಂಬ ಚಪಲವಿತ್ತು. ಆದರೆ ಇವಳಿಗೆ ಕೇವಲ

ತಾನೊಮ್ಮೆ ತಾಯಿಯಾದರೆ ಸಾಕು ಎಂಬ ಹಂಬಲವಿದೆ. ತಾನು ಹೊತ್ತು ಹೆತ್ತ ಮಗುವನ್ನು ಬಿಟ್ಟು ಹೋಗುವ ನಿಷ್ಕರುಣೆಯವಳು ಅಲಕಾ. ತಾಯ್ತನದ ವೈಭವವನ್ನು ಒಂದೊಂದು ಕ್ಷಣವೂ ಅನುಭವಿಸಬೇಕೆಂಬ ಸ್ತ್ರೀಸಹಜ ಮನೋಭಾವದ ಸಂಧ್ಯಾ.... ಎಳೆಯ ಮಗುವನ್ನು ಗಂಡನನ್ನು ಬಿಟ್ಟು ಬೇರೊಬ್ಬನೊಡನೆ ಹೊರಟು ಹೋದ ಅಲಕಾ ನನ್ನ ಹೆಂಡತಿಯಾಗಿದ್ದವಳು ? ಇದುವರೆಗೆ ತನಗೆ ಸಿಗದೇ ಇದ್ದುದನ್ನು ನನ್ನಿಂದ ಪಡೆಯುವ ಆಸೆ ಹೊತ್ತು ನನ್ನ ಬಳಿಗೆ ತಾನಾಗಿಯೇ ಬಂದು ಈ ಸಂಧ್ಯಾ ಇನ್ನೊಬ್ಬನ ಹೆಂಡತಿ !....ಎಂಥಾ ವ್ಯತ್ಯಾಸಗಳು ಇಬ್ಬರಲ್ಲೂ? ಚೆನ್ನಾಗಿದೆ. ಇವರಲ್ಲಿ ಒಳ್ಳೆಯವರು ಯಾರು ? ಕೆಟ್ಟವರು ಯಾರು ? ಎಂದು ಹೇಗೆ ಹೇಳುವುದು ? ಒಂದು ತರಹದಲ್ಲಿ ಇಬ್ಬರೂ ಸರಿಯಿಲ್ಲ. .. ಅಲಕಾ ನನಗೆ ತಿಳಿಯದಂತೆ ಬೇರೊಬ್ಬನ ಸಂಗ ಮಾಡಿದ್ದರೂ, ತಾನು ಅವಳನ್ನು ಹೆಂಡತಿ ಎಂದೇ ಆದರಿಸುತ್ತಿದ್ದೆ. ಒಂದು ವೇಳೆ ತಿಳಿದರೂ ನಾನು ಅವಳನ್ನು ಕ್ಷಮಿಸುತ್ತಿದ್ದೆ... ಏಕೆಂದರೆ ನಾನು ಅವಳನ್ನು ಪ್ರೀತಿಸುತ್ತಿದ್ದೆ. ಪ್ರೀತಿಸಿದವನಿಗೆ ದ್ರೋಹ ಮಾಡಿ, ಹೊರಟು ಹೋದಳು ಪಾಪಿ ... !

ಆದರೆ ಇವಳು ! ಇವಳು ಯಾವ ಪುಣ್ಯವಾದ ಕೆಲಸವನ್ನು ಮಾಡಿದಾಳೆ ..? ಕೈ ಹಿಡಿದ ಗಂಡನಿಗೂ ತಿಳಿಸದೇ ಪರಪುರುಷನ ಸಂಗಮಾಡಿ, ಆ ಮನೆಯ ವಂಶವನ್ನು ಬೆಳೆಸಲು ಹೊರಟಿದ್ದಾಳೆ.... ಅವಳು ಅವನ ಹೆಂಡತಿ ! ಆ ಮಗು ಅವನ ಮನೆಯ ಮಗುವಾಗಿ ಬೆಳೆಯುತ್ತೆ... ಇದೆಂತಹ ವಿಚಿತ್ರ ? ತನಗೆ ಯಾವ ಅಧಿಕಾರವೂ ಇರುವುದಿಲ್ಲ?

ಮಗು ? ಇದ್ದಕ್ಕಿದ್ದಂತೆ ಅವನ ಯೋಚನಾ ಲಹರಿ ನಿಂತಿತು. ಅವಳಿಗೆ ಮಗುವಾಗಲಿದೆ ಎಂದು ತನಗ್ಯಾರು ಹೇಳಿದ್ದಾರೆ ..? ಅದು ತನ್ನ ಊಹೆ. ಅದಕ್ಕೇ ಅವಳು ಮತ್ತೆ ಬಂದಿಲ್ಲವೇನೋ ಎಂಬ ಅನುಮಾನ. ಹತ್ತು ವರ್ಷ ಗಂಡನೊಡನೆ ಸಂಸಾರ ನಡೆಸಿದ್ದ ಅವಳಿಗೆ ಮಕ್ಕಳಾಗಿರಲಿಲ. ಈಗ ಇಷ್ಟು ಬೇಗ... ಆ ಸೂಚನೆ ಇರಬಹುದು ಅಂತ ತನಗೆ ಯಾಕೆ ಅನ್ನಿಸತೊಡಗಿತು ? ಗೀತನೊಡನೆ ಮಾತನಾಡಿದ ಪ್ರಭಾವವೇ ಇರಬೇಕು ಎಂದುಕೊಂಡು ತನಗೆ ತಾನೇ ನಕ್ಕು ನಿದ್ರಿಸಲು ಯತ್ನಿಸಿದ.

ಗೀತ ಸ್ವಲ್ಪ ಚೇತರಿಸಿಕೊಂಡು ತಾನೇ ಮನೆ ಕೆಲಸಗಳನ್ನು ನೋಡಿಕೊಳ್ಳಲು ಆರಂಭಿಸಿದ ಮೇಲೆ ದಿನೇಶ ತನ್ನ ಎಸ್ಟೇಟಿಗೆ ವಾಪಸ್ಸು ಹೋಗಿದ್ದ. ಈ ಸಾರಿ ಇಲ್ಲಿ ಅವನನ್ನು ಒಂಟಿತನ ಬಹಳವಾಗಿ ಕಾಡಿತು. ಅಣ್ಣನ ಮನೆಯಲ್ಲಿ ಅತ್ತಿಗೆಯ ಜತೆ ಹರಟೆ, ಮಕ್ಕಳೊಡನೆ ಆಟಪಾಠಗಳಲ್ಲಿ ದಿನದ ಸಮಯ ಕಳೆದು ಹೋಗುತ್ತಿತ್ತು. ಎಸ್ಟೇಟಿನಲ್ಲಿ ಬೇಗ ಬೇಸರವಾಗತೊಡಗಿತು. ನಿಲ್ಲಿಸಿದ್ದ ತೋಟದ ಕೆಲಸವನ್ನು ಇನ್ನು ಪ್ರಾರಂಭಿಸಲು ಆಗಿರಲಿಲ್ಲ. ಮಧ್ಯೆ ಮಧ್ಯೆ ಅಣ್ಣನ ಮನೆಗೂ ಹೋಗಿ ಬರುತ್ತಿದ್ದ.

ಒಂದು ದಿನ ಅಣ್ಣ ಅವನನ್ನು ಕೇಳಿದ.

"ಏನಯ್ಯಾ ಯಾರದು ಸಂಧ್ಯಾ ಅಂತ. ನಿನ್ನನ್ನು ವಿಚಾರಿಸಿಕೊಂಡು ಇಲ್ಲಿಗೆ ಬಂದಿದ್ದಳು...."

ತಟಕ್ಕನೆ ದಿನೇಶ ಅಲ್ಲಿಯೇ ನಿಂತಿದ್ದ ಗೀತಳ ಕಡೆ ನೋಡಿದ. ಅವಳು ಮುಗುಳ್ನಕ್ಕಾಗ ಇವನಿಗೆ ಸಮಾಧಾನವೆನಿಸಿತು.

''ಯಾರೋ ನನಗೆ ಗೊತ್ತಿಲ್ಲ...'' ಸುಳ್ಳು ಹೇಳಿದ. ''ಏನು ಬೇಕಿತ್ತಂತೆ ಅವಳಿಗೆ' ಮತ್ತೆ ತಡೆದು ಕೇಳಿದ.

''ಎಸ್ಟೇಟಿನ ಅಡ್ರೆಸ್ ಕೇಳಿದಳು. ನಿನಗೆ ಅವಳ ಪರಿಚಯ ಇದೆಯಾ ?''

''ಕೊಡಬೇಕಾಗಿತ್ತು....'' ಆತುರದಿಂದ ನುಡಿದವನು ತಕ್ಷಣ ನಾಲಿಗೆಯನ್ನು ಕಚ್ಚಿಕೊಂಡು ಸುಮ್ಮನಾದ.'' ಗೀತ ಸಂಜ್ಞೆ ಮಾಡಿ ಅವನನ್ನು ಒಳಗೆ ಕರೆದಳು. ''ಈಗ ಬಂದೆ'' ಎಂದು ಒಳಗೆ ಹೋದನು. ''ಏನತ್ತಿಗೆ ? ಅವಳೇಕೆ ಇಲ್ಲಿಗೆ ಬಂದಿದ್ದಳು ! ಅಣ್ಣನ ಹತ್ತಿರ ಏನು ಹೇಳಿದಳು ! ''ಗಾಬರಿಯಿಂದ ಕೇಳಿದ.

''ಎಲ್ಲಾ ಹೇಳಿರಬಹುದು...'' ಕೀಟಲೆಯ ಧ್ವನಿಯಲ್ಲಿ ಹೇಳಿದಳು.

''ಹೌದಾ !'' ಬೆಚ್ಚಿದ. ''ಅಣ್ಣ ಏನಂದ ?''

''ಅವಳ್ಯಾರು ? ಅವನಿಗೂ ಇವಳಿಗೂ ಏನು ಸಂಬಂಧ ಅಂತ ಕೂಗಾಡಿದರು.''

''ಛೇ ಎಂತಹ ಕೆಲಸವಾಯ್ತು ? ನಾನು ಇದ್ದಾಗ ಬರಬಾರದಾಗಿತ್ತಾ ? ನಿಮ್ಮ ಹತ್ತಿರ ಮಾತನಾಡಲಿಲ್ವಾ ? ಅವನ ಹತ್ರ ಏನು ಮಾತು ?'' ಮರ್‍ಯಾದೆ ತೆಗೆದುಬಿಟ್ಟಳು.

''ಇಲ್ಲ ನಾನು ಡಾಕ್ಟರ ಹತ್ತಿರ ಹೋಗಿದ್ದೆ'' ಎಂದಳು. 'ಅಯ್ಯೋ' ಎನ್ನುತ್ತಾ ಅವನು ತಲೆಯ ಮಲೆ ಕೈ ಹೊತ್ತು ಕುಳಿತಾಗ ಅವಳಿಗೆ ನಗುವನ್ನು ತಡೆಯಲಾಗಲಿಲ್ಲ.

''ಅಯ್ಯೋ ಹುಚ್ಚಪ್ಪಾ. ಅಂಥದ್ದೇನೂ ನಡೆದಿಲ್ಲ ಬಿಡು. ಅವಳು ಇವರ ಸ್ಟೂಡೆಂಟ್ ಅಲ್ವಾ ! ಆಸ್ಪತ್ರೆಯಲ್ಲಿ ಸಿಕ್ಕಿದಾಗ ನಾನೇ ಮಾತನಾಡಿಸಿ, ಇವರಿಗೆ ಪರಿಚಯ ಮಾಡಿಕೊಟ್ಟೆ ಹಾಗೇ ಅವಳು ನಿಮ್ಮ ಎಸ್ಟೇಟಿಗೆ ಬಂದಿದ್ದರ ಬಗ್ಗೆಯೂ ತಿಳಿಸಿದೆ. ಅವಳು ನೀವು ಹೇಗಿದೀರಿ ಅಂತ ನಿನ್ನ ಬಗ್ಗೆ ವಿಚಾರಿಸಿದಳು ಅಷ್ಟೇ. ''

''ಇನ್ನೇನು ಹೇಳಿದಳು ! ಅವಳೇಕೆ ಆಸ್ಪತ್ರೆಗೆ ಬಂದಿದ್ದಳು ?''

''ಅಂಥ ಆಸ್ಪತ್ರೆಗೆ ಹೆಂಗಸರು ಇನ್ಯಾಕೆ ಬರ್ತಾರೆ !ಗೊತ್ತಾಗುಲ್ವೆ ? ನಾನೂ ಚೆಕಪ್‌ಗೆಅಂತ ಹೋಗಿದ್ದೆ. ಅವಳುಬಂದಿದ್ದಳು. ಅದೇ ಇರಬಹುದು.''

''ಅದೇ ಅಂದರೆ ? '' ಅಷ್ಟರಲ್ಲೇ ಏನೋ ಅರ್ಥವಾದವನಂತೆ ಇದ್ದಕ್ಕಿದ್ದಂತೆ ಸುಮ್ಮನಾದ. ಗೀತ ಅದನ್ನು ಗಮನಿಸಲಿಲ್ಲ.

''ಥೂ ನಿನಗೆಲ್ಲಾ ಹೇಳಬೇಕಾ ?.....''ಅಷ್ಟರಲ್ಲಿ ಅವನು ಉದ್ವೇಗದಿಂದ ಅವಳ ಕೈಗಳನ್ನು ಹಿಡಿದು ಕೇಳಿದ ''ನಾನು ಅವಳನ್ನು ಒಂದು ಸಲ ನೋಡಿ, ಮಾತನಾಡಿಸಬೇಕಲ್ಲ. .. ಅವಳು ಸಿಗುವಂತೆ ಮಾಡಬೇಕಲ್ಲ.'' ಪ್ಲೀಸ್ ....ಪ್ಲೀಸ್......

"ಇನ್ನೂ ಅವಳ ಆಸೇನ ಬಿಟ್ಟಿಲ್ವಾ ನೀನು...?"

"ಹೇಗೆ ಬಿಡಲಿ ? ಅದು ಆಸೆಯಲ್ಲ. ನಿಮಗೆ ಅರ್ಥವಾಗುವುದಿಲ್ಲ " ಹುಚ್ಚನಂತೆ ತಲೆಯ ಕೂದಲಿನಲ್ಲಿ ಕೈಗಳನ್ನು ಹೊರಳಾಡಿಸಿದ.

"ಥೂ ಅತಿಯಾಯ್ತು ನಿಂದು. ಅವಳ್ಯಾರೋ, ನೀನ್ಯಾರೋ. ಆದರೆ ನಿನ್ನ ಆರೋಗ್ಯ ಕೆಟ್ಟು ಹೋಗುತ್ತೆ ಅಷ್ಟೆ. ಈಗ ನಾನು ಏನು ಮಾಡಲಿ ಹೇಳು....?"

"ನೀವು ಅಣ್ಣನಿಗೆ ತಿಳಿಯದಂತೆ ಅವಳ ಮನೆಗೆ ಹೋಗಿ ಅವಳನ್ನು ಕರೆದುಕೊಂಡು ಬನ್ನಿ. ನಾನು ಅವಳ ಹತ್ತಿರ ಅರ್ಜೆಂಟಾಗಿ ಮಾತನಾಡಲೇಬೇಕು."

'ಆಗಲಿ' ಎಂದು ಅವಳು ಹೇಳುವಂತೆ ಒತ್ತಾಯಿಸಿದ.

ಸಂಧ್ಯಾಳ ಮನೆಯ ಮುಂದೆ ಕಾರನ್ನು ನಿಲ್ಲಿಸಿದ. ಗೀತಾ ಇಳಿದು ಒಳಗೆ ಹೋದಳು. ಮನೆಯಲ್ಲಿ ಸಂಧ್ಯಾ ಒಬ್ಬಳೇ ಇದ್ದಳು. ಬಾಗಿಲು ತೆಗೆದು ಆಚೆ ನೋಡಿದಳು. ಹಿಂದೆ ನಿಂತಿದ್ದ ಕಾರನ್ನು ಕಂಡು ಬೆವರಿದಳು. ಅವಳು ಬಿಳುಪೇರಿ ಹೋಗಿದ್ದಳು.

'ಏನಾಯ್ತು!' ಗೀತ ಕೇಳುತ್ತಿದ್ದಂತೆ ಸಂಧ್ಯಾ ತಲೆಸುತ್ತಿ ಬವಳಿ ಬಂದು ಬಿದ್ದುಬಿಟ್ಟಳು. ಗೀತ ದಿನೇಶನನ್ನು ಗಾಬರಿಯಿಂದ ಕರೆದಳು. ಅವನು ಧಾವಿಸಿಬಂದ. ಇಬ್ಬರೂ ಆತಂಕದಿಂದ ಅವಳನ್ನು ಎತ್ತಿ ಅಲ್ಲಿಯೇ ಇದ್ದ ಸೋಫಾದ ಮೇಲೆ ಮಲಗಿಸಿದರು. ನಿಧಾನವಾಗಿ ಕಣ್ಣು ಬಿಟ್ಟು ಅವಳು ದಿನೇಶನನ್ನು ನೋಡಿ ಎದ್ದು ಕೂರುವ ಪ್ರಯತ್ನವನ್ನು ಮಾಡಿದಳು.

"ಯಾಕೆ ಸಂಧ್ಯಾ ! ಏನಾಯ್ತು" ಗೀತ ವಿಚಾರಿಸುತ್ತಿದ್ದಂತೇ ದಿನೇಶ ಹೇಳಿದ .

"ನಡೀರಿ ಈಗಲೇ ಆಸ್ಪತ್ರೆಗೆ ಹೋಗಿ ತೋರಿಸಿಕೊಂಡು ಬರೋಣ." ಹ್ಞೂಂ ಹೌದು ಎಂದು ಗೀತ ಸಹ ಧ್ವನಿಗೂಡಿಸಿದಳು.

"ಬೇಡ ಪರವಾಗಿಲ್ಲ. ಈಗ ಆರಾಮವಾಗಿದೀನಿ"ಎಂದಳು ಸಾವರಿಸಿಕೊಳ್ಳುತ್ತಾ...

"ಇಲ್ಲ ಏನೂ ಸರಿ ಇಲ್ಲ. ನಿಶ್ಶಕ್ತಿ ಇರಬೇಕು.... ಇಂತಹ ದಿನಗಳಲ್ಲಿ ಇವೆಲ್ಲಾ ಸಾಮಾನ್ಯವಾದರೂ, ಡಾಕ್ಟರ ಸಲಹೆ ಬೇಕೇ ಬೇಕು. ನಡೀರಿ. ಹೋಗಿ ಬರೋಣ. ಹೇಗೂ ಇವನ ಕಾರು ಇದೆ... ಏಳಿ ಎನ್ನುತ್ತಾ ಎಬ್ಬಿಸಲು ನೋಡಿದಳು."

"ಬೇಡ ಬಿಡಿ ಅತ್ತಿಗೆ. ಅವರಿಗೆ ನನ್ನಕಾರಿನಲ್ಲಿ ಬರುವ ಇಷ್ಟವಿಲ್ಲದಿರಬಹುದು" ಎಂದ ದಿನೇಶ. ವ್ಯಂಗ್ಯದಿಂದ.

"ಹಾಗಲ್ಲ. ನೆನ್ನೆ ತಾನೇ ಡಾಕ್ಟರ ಹತ್ತಿರ ಹೋಗಿ ಬಂದೆ. ಏನೂ ತೊಂದರೆ ಇಲ್ಲ ಎಂದಿದಾರೆ.... ಮತ್ತೇಕೆ! ಹೋಗೋದೇನೂ ಬೇಡ. "

"ಏನಾಗಿದೆ ನಿಮಗೆ ?" ದಿನೇಶ ದಿಢೀರನೆ ಕೇಳಿದಾಗ ಅವಳು ಬೆಚ್ಚಿದಂತೆ ಮಾಡಿ ತಲೆ ತಗ್ಗಿಸಿದಳು. "ಅತ್ತಿಗೆ ನಾನು ಸ್ವಲ್ಪ ಮಾತನಾಡಬೇಕು. ನೀವು ಹೊರಗೆ ಇರ್ತೀರಾ?"

ಮುಲಾಜಿಲ್ಲದೇ ಅವನು ಹೇಳಿದಾಗ, ಗೀತ ಮುಂದಿದ್ದ ವರಾಂಡಕ್ಕೆ ಬಂದಳು. ಅವಳ ಗಂಡ ಮನೆಯಲ್ಲಿ ಇಲ್ಲವೆನ್ನುವುದು ಅರಿವಾಗಿತ್ತು.

''ಸಂಧ್ಯಾ'' ಎನ್ನುತ್ತಾ ಅವನು ಅವಳ ಕೈ ಹಿಡಿಯಲು ಹೋದಂತೆ ಅವಳು ಹಿಂದೆ ಹಿಂದೆ ಸರಿದಳು. ''ಏನಾಯ್ತು ಅಂತ ಹೇಳಬಾರದಾ ? ನಾನು ನಿಮಗೋಸ್ಕರ ಎಷ್ಟು ದಿನದಿಂದ ಕಾಯ್ತಿದೀನಿ. ... ನೀವು ಬರಲೇ ಇಲ್ಲ, ಅದಕ್ಕೆ ನಾನೇ ಬಂದೆ... ನೀವಿಲ್ಲದೆ ನಾನು ಹೇಗೆ ಇರಲಿ ? ನಾನು ನಿಮ್ಮನ್ನ ಪ್ರೀತಿಸ್ತಿದೀನಿ. ನನಗೆ ನೀವು ಬೇಕು'' ಎಂದು ಮುಂದೆ ಬಾಗಿದ. ಅವಳು ಬೆದರಿದಳು.

ಹಿಂದಕ್ಕೆ ಅವನನ್ನು ತಳ್ಳಿ ಅವಳು ಎದ್ದು ನಿಂತಳು. ''ಪ್ಲೀಸ್ ಹೊರಟು ಹೋಗಿ. ಅದೆಲ್ಲ ಮುಗಿದ ಕತೆ.. ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡಿ....''

''ಏಕೆ ? ಏಕೆ ಬಿಡಬೇಕು ? ನಿಮ್ಮ ಅಗತ್ಯ ಇನ್ನಿಲ್ಲ ಅಂತ ಹೇಳುತ್ತಾ ಇದೀರಾ. ನನ್ನಪಾಡಿಗೆ ನಾನು ಇದ್ದೆ, ನನ್ನನ್ನು ಕೆರಳಿಸಿ, ನನ್ನನ್ನು ಬದಲಾಯಿಸಿದವರು ... ಈಗ .... ಏನಾಯ್ತು?''

''ಹೂಂ.... ಹಾಗೇ ತಿಳಿದುಕೊಳ್ಳಿ. ನನ್ನ ಆಸೆ ಫಲಿಸಿದೆ. ನಾನು ಸಧ್ಯದಲ್ಲೇ ತಾಯಿಯಾಗಲಿದ್ದೇನೆ. .... ನನಗೆ ಇನ್ನೇನು ಬೇಕು. ನಿಮ್ಮ ಅಗತ್ಯ ಇನ್ನಿಲ್ಲ.'' ಇಷ್ಟಕ್ಕೇ ಸಾಕು.

''ಅಂದರೆ ಎಲ್ಲಾ ಮರೆತು ಬಿಡು ಅಂತೀರಾ... ಇದು ಮೋಸ... ''

''ಮರೆಯಲೇ ಬೇಕು. ನಾನು ಇದೊಂದನ್ನೇ ನಿಮ್ಮಿಂದ ಬಯಸಿದ್ದು. ಪ್ರೀತಿಯನ್ನಲ್ಲ. ದಯವಿಟ್ಟು ನನ್ನನ್ನ ಮಾತ್ರ ಮತ್ತೆ ನೋಡಬೇಡಿ. ಪ್ರೀತಿಗೆ ಸ್ಥಳವಿಲ್ಲ. ಎಲ್ಲಾ ಮುಗಿದ ಕತೆ.

''ಹಾಗಾದರೆ ನನ್ನ ಪ್ರೀತಿಗೆ ಬೆಲೆ ಇಲ್ಲವೆ? ''

''ನಾನು ನಿಮ್ಮನ್ನು ಪ್ರೀತಿಸುತ್ತಿಲ್ಲವಲ್ಲ ನಿಮ್ಮ ಪ್ರೀತಿ ನನಗೆ ಬೇಕಿಲ್ಲವಲ್ಲ.''

''ಸಂಧ್ಯಾ .....'' ಎತ್ತರದ ಧ್ವನಿಯಲ್ಲಿ ಕಿರುಚಿದ. ''ನೀವು ನನ್ನನ್ನು ಪ್ರೀತಿಸದೇ ಇರಬಹುದು. ಆದರೆ ನಾನು ನಿಮ್ಮನ್ನು ಪ್ರೀತಿಸುತ್ತಿದೀನಿ. ನಿಮ್ಮ ಹೊಟ್ಟೆಯಲ್ಲಿ ಬೆಳೆಯುತ್ತಿರುವ ಮಗು ನನ್ನದು.... ನನ್ನ ಪ್ರೀತಿಯ ಫಲ ಇದು.''

''ಅಲ್ಲ.... ಈ ಮಗು ನನ್ನದು.... ಕೇವಲ ನನ್ನದು. ಮಹಾಭಾರತದ ಪ್ರಸಂಗವನ್ನು ನೆನಪಿಸಿಕೊಳ್ಳಿ.... ಆ ಕಾರ್ಯ ಸಫಲವಾದ ಮೇಲೆ, ನನ್ನ ನಿಮ್ಮ ಸಂಬಂಧ, ಪ್ರೀತಿ, ಪ್ರೇಮ ಯಾವುದೂ ಇಲ್ಲ. ನನ್ನ ದಾರಿ ನನಗೆ.... ನಿಮ್ಮ ದಾರಿ ನಿಮಗೆ...''

''ನಾವು ಆ ಯುಗದಲ್ಲಿ ಇಲ್ಲ ಕಲಿಯುಗದಲ್ಲಿ ಈ ಪದ್ಧತಿ ನಿಷಿದ್ಧ. ಆ ರೀತಿ ಯೋಚಿಸಲು ಸಾಧ್ಯವಿಲ್ಲ. ಇಲ್ಲಿಯ ಸಂಬಧಗಳೇ ಬೇರೆ. ''

"ಯುಗ ಯಾವುದಾದರೇನು ? ಧರ್ಮ ಪದ್ಧತಿ ಎಲ್ಲಾ ಒಂದೇ. ನಿಯಮವೂ ಅದೇ..... "ಎಂದಳು. ಯಾವ ಅಳುಕೂ ಇಲ್ಲದೆ.

ಅವಳ ಕೆನ್ನೆಗೆ ಬಾರಿಸುವಷ್ಟು ಕೋಪ ಬಂದರೂ ತಡೆದುಕೊಂಡ. ಹಲ್ಲು ಕಡಿದ. "ಆ ನಿಯಮವನ್ನು ನನಗೆ ತಿಳಿಸಿಕೊಡಬೇಕಾಗಿಲ್ಲ. ಹಾಗಾದರೆ ನಿಮ್ಮ ಗಂಡನಿಗೆ ತಿಳಿಸಿ, ಅವರ ಅನುಮತಿ ಪಡೆದು ನನ್ನ ಬಳಿಗೆ ಬಂದಿದ್ರಾ ? ಇಲ್ಲ ತಾನೇ...?"

"ನನ್ನ ಗಂಡನಿಗೆ ನಾನೇ ಎಲ್ಲವನ್ನೂ ತಿಳಿಸುತ್ತೇನೆ. ನನ್ನ ಮೇಲಿನಪ್ರೀತಿಯಿಂದ ಅವರು ಒಪ್ಪಬಹುದು. ಆ ನಂಬಿಕೆ ನನಗಿದೆ. ನಾನು ಅವರನ್ನು ಪ್ರೀತಿಸ್ತೀನಿ."

"ಇಲ್ಲ ನಿಮ್ಮ ಗಂಡನ ಮೇಲೆ ನಿಮಗೆ ನಿಜವಾದ ಪ್ರೀತಿ ಇದ್ದಿದ್ದರೆ, ನೀವು ಖಂಡಿತಾ ನನ್ನ ಬಳಿಗೆ ಬಂದು ಸಂತಾನ ಭಿಕ್ಷೆಯನ್ನು ಬೇಡುತ್ತಿರಲಿಲ್ಲ. ಛೇ.... ದ್ರೋಹ......ದ್ರೋಹ.." ಕೂಗಾಡಿದ.

"ಅದನ್ನು ಮಾತ್ರ ಕೇಳಿದೆ. ಪ್ರೀತಿಯನ್ನು ನಾನು ಬಯಸಲಿಲ್ಲ " ನಿರಾಕಾರದಿಂದ ನುಡಿದಳು.

"ಸಂಧ್ಯಾ ನೀವು ಇಷ್ಟು ನಿಷ್ಕರುಣಿ ಅಂತ ನಾನು ತಿಳಿದಿರಲಿಲ್ಲ. ನನ್ನ ಪ್ರೀತಿಯ ಅರಿವು ನಿಮಗೆ ಆಗಲಿಲ್ಲವೇ ! ನಿಜ ಹೇಳಿ... ಇಲ್ಲದಿದ್ದರೆ ನಾನು ಅಷ್ಟು ನಿಕಟವಾಗಲು ಸಾಧ್ಯವೇ ಇರಲಿಲ್ಲ. "

ಸಂಧ್ಯಾ ಇದ್ದಕ್ಕಿದ್ದಂತೆ ಬಿಕ್ಕಿ ಬಿಕ್ಕಿಅಳಲಾರಂಭಿಸಿದಾಗ ಅವನು ಬೆದರಿದ. "ಹೋಗಲಿ ಬಿಡಿ, ಅಳಬೇಡಿ. ನನ್ನ ಅನ್ನಿಸಿಕೆಯೇ ತಪ್ಪಾಗಿರಬಹುದು. ಆದರೂ... ನಾನು ಪ್ರೀತಿಸುವ ಮಾತು ನಿಜ."

"ನೀವೇ ಹೇಳಿ..... ನಾನು ನಿಮ್ಮನ್ನು ಹೇಗೆ ಪ್ರೀತಿಸಲಿ ! ನನ್ನ ಗಂಡನನ್ನು ಈ ಮನೆಯನ್ನು ಬಿಟ್ಟು ಪದೇಪದೇ ಬರಲು ನಿಜವಾಗಿಯೂ ಸಾಧ್ಯವಿಲ್ಲ.... ನೀವು ನನ್ನನ್ನು ಪ್ರೀತಿಸುವುದಾದರೆ, ನನ್ನದೊಂದು ಮಾತನ್ನು ನಡೆಸಿಕೊಡು. ಇನ್ನು ಮೇಲೆ ನನ್ನನ್ನು ಭೇಟಿಯಾಗಬೇಡಿ. ನನ್ನನ್ನು ಬಯಸಬೇಡಿ. ನನ್ನನ್ನು ಮರೆತುಬಿಡಿ... ನನ್ನ ಅವಿವೇಕವನ್ನು ಕ್ಷಮಿಸಿಬಿಡಿ. ..."ಎನ್ನುತ್ತಾ ಅವಳು ಅವನ ಕಾಲುಗಳನ್ನು ಹಿಡಿಯಲು ಬಾಗಿದಳು.

ದಿನೇಶ ಹಿಂದೆ ಸರಿದ.

"ಸರಿ, ನಿಮ್ಮ ಮೇಲಿನ ಪ್ರೀತಿಯಿಂದ ನೀವು ಹೇಳಿದಂತೆ ಮಾಡ್ತೀನಿ. ಆದರೆ ನೀವು ಮಾತ್ರ ಮೊದಲಿನಂತೆಯೇ ನನ್ನ ಮೇಲೆ ಸ್ನೇಹವನ್ನು ಇಟ್ಟುಕೊಂಡಿರಬೇಕು. ನನ್ನ ಮಗುವನ್ನು ನಾನು ನೋಡಲು ಅವಕಾಶವನ್ನು ನೀವು ಮಾಡಿಕೊಡಬೇಕು. ಇಷ್ಟಾದರೂ ನನ್ನ ಪಾಲಿಗಿರಲಿ. ಅವಿವೇಕಿ ನೀವೊಬ್ಬರೇ ಅಲ್ಲ, ನಾನೂ ಕೂಡಾ."

"ಆಗಲಿ ಪ್ರಯತ್ನಿಸ್ತೀನಿ," ಅವಳು ಕಷ್ಟದಿಂದನುಡಿದಂತೆ ಅನ್ನಿಸಿದಾಗ, ಅವಳಿಗೆ ಏನೋ ಭಯ ಆವರಿಸಿದೆ ಎಂಬ ಅರಿವಾಯಿತು. ಅಲ್ಲಿ ನಿಲ್ಲಲು ಇಷ್ಟವಾಗದೇ ಹೊರಗೆ

ಬಂದ. ವರಾಂಡದಲ್ಲಿ ಕೂತಿದ್ದ ಗೀತಂಗೆ ''ನಡೀರಿ ಅತ್ತಿಗೆ ಹೋಗೋಣ' ಎಂದು ಆಚೆ ಬಂದು, ಕಾರನ್ನು ಹತ್ತಿ ಕುಳಿತ. ಗೀತ ಹೊರಬಂದು ಕಾರನ್ನು ಹತ್ತಿದೊಡನೆ ಕಾರು ಚಲಿಸಿತು. ''

ಏನು ಮಾತು ಕತೆ ನಡೆಯಿತು ಎಂದು ಅವಳು ಕೇಳಲಿಲ್ಲ , ಇವನೂ ಹೇಳಲಿಲ್ಲ. ಗೀತನ್ನ ಅವಳ ಮನೆಯ ಮುಂದೆ ಇಳಿಸಿ , ಬರ್ತೀನಿ ಎಂದಷ್ಟೇ ಹೇಳಿ ಕಾರನ್ನು ಎಸ್ಟೇಟಿನ ಕಡೆಗೆ ಓಡಿಸಿದ. ಅವನ ಮನ್ಸು ಸರಿಯಾಗಿರಲಿಲ್ಲ. ಒಬ್ಬನೇ ಏಕಾದರೂ ಹೋದನೋ ಎಂದು ಆತಂಕಗೊಂಡಳು ಗೀತ.

ಮುಂದೆ ಅವನಿಂದ ದಿನಗಳನ್ನು ಕಳೆಯುವುದು ಅಸಾಧ್ಯವೆನಿಸಿತು. ಅಲಕಾ ತನ್ನನ್ನ ಬಿಟ್ಟು ಹೋದಾಗ ಕೂಡಾ ತಾನಿಷ್ಟು ಮನಸ್ಸಿಗೆ ಹಚ್ಚಿಕ್ಕೊಂಡಿರಲಿಲ್ಲ. ಆದರೆ ತನಗೆ ಈಗೇಕೆ ಹೀಗೆ ಆಗುತ್ತಿದೆ ! ಅವಳು ಮದುವೆಯಾದಳು ಎಂದು ತನಗೆ ತಿಳಿದಿದ್ದ ವಿಷಯವೇ. ಆದರೂ ತಾವೇಕೆ ಅವಳನ್ನು ಪ್ರೀತಿಸಿದೆ ! ತನ್ನದೇ ಮಗುವನ್ನು ಬಯಸಿದಳು ಎನ್ನುವ ಕಾರಣವೇ ಇರಬಹುದು.... ಅಲಕಾ ಬಸಿರಿಯಾದಾಗ ಸಂತೋಷಗೊಂಡಿರಲಿಲ್ಲ. ತನಗೆ ಈಗಲೇ ಮಗು ಬೇಡವೆಂದು ಅತ್ತು ಕರೆದು ರಂಪ ಮಾಡಿದ್ದಳು. ಆದರೆ ಇವಳು ಒಂದು ಮಗುವನ್ನು ತನ್ನಿಂದ ಕಾಡಿಬೇಡಿ ಪಡೆಯುತ್ತಿದ್ದಾಳೆ ಇದೇ ಕಾರಣವೇ ? ನನ್ನ ಮಗು ಅವಳು ಹೊಟ್ಟೆಯಲ್ಲಿ ಬೆಳೆಯುತ್ತಿದೆ ಎಂದು ತಾನು ಅವಳನ್ನು ಪ್ರೀತಿಸುತ್ತಿದ್ದೇನೆಯೆ ? ಆದರೆ ಈ ಪ್ರೀತಿ ತನಗೆ ದಕ್ಕುವುದಿಲ್ಲ. ಅವಳು ಎಲ್ಲವನ್ನೂ ಮರೆತು, ಆ ಸಂಸಾರದಲ್ಲಿ ಆ ಗಂಡನೊಡನೆ ಇರುವ ಧೈರ್ಯಸ್ಥೆ ತನ್ನ ಬಳಿಗೆ ಮತ್ತೆಂದೂ ಬರಲಾರಳು ಅಂತ ಎನಿಸಿದಾಗ ಶೂನ್ಯ ಕವಿದಂತಾಯಿತು. ಅವಿವೇಕಿ, ಮೂರ್ಖ ಎಂದು ಹಳಿದುಕೊಂಡ.

ಇದನ್ನೆಲ್ಲ ತಾನು ಮರೆಯಲೇಬೇಕು. ಅದಕ್ಕಾಗಿ ಕೆಲವು ದಿನಗಳ ಮಟ್ಟಿಗಾದರೂ ನಾನೆಲ್ಲಿಗಾದರೂ ಇಲ್ಲಿಂದ ಹೋಗಲೇಬೇಕು.... ಎಲ್ಲಿಗೆ ಹೋಗಲಿ ! ಅಣ್ಣನ ಮನೆಯ ಹೊರತು ತನ್ನ ಸಂಬಂಧಿಕರು, ಹೋಗಿ ಬಂದು ಮಾಡುವಂತಹವರಿಲ್ಲ. ತೀರ್ಥಯಾತ್ರೆ ಹೋಗುವಷ್ಟು ವೈರಾಗ್ಯ ತನಗಿನ್ನುಬಂದಿಲ್ಲ. ಸುತ್ತಾಡಲು, ತಿರುಗಾಡಲು ಒಂಟಿಯಾಗಿ ಹೋದರೆ ಏನು ಚೆನ್ನ ? ಅಣ್ಣ, ಅತ್ತಿಗೆ, ಮಕ್ಕಳು ಬರುವಂತಿದ್ದರೆ ...? ಅಣ್ಣನಿಗೆ ರಜೆ ಇದೆಯೋ ಇಲ್ಲವೋ ? ಮಕ್ಕಳಿಗೆ ಸ್ಕೂಲು... ಗೀತ ಈಗಿನ್ನೂ ಚೇತರಿಸಿಕೊಳ್ಳುತ್ತಿದಾಳೆ... ಸಂಧ್ಯಾಳನ್ನು ಬಲವಂತಮಾಡಿ ತನ್ನ ಜತೆಯಲ್ಲಿ ಕರೆದುಕೊಂಡು ಹೋಗುವಂತಿದ್ದರೆ ನಗು ಬಂತು..... ಅವಳು ಬರುವಂತಿದ್ದರೆ ತಾನೇಕೆ ಇನ್ನೆಲ್ಲಿಗಾದರೂ ಹೋಗಬೇಕು? ಇಲ್ಲಿಯೇ ಆರಾಮವಾಗಿರಬಹುದಲ್ಲ....''

ಸಿನಿಮಾ, ಟಿ.ವಿ. ರೇಡಿಯೋ ಯಾವುದರಲ್ಲೂ ಆಸಕ್ತಿ ಇಲ್ಲವಾಯಿತು. ಒಂದೆರಡು ದಿನಗಳನ್ನು ಸಹ ಕಳೆಯುವುದು ಸಾಕು ಸಾಕಾಗಿ ಕಂಡಿದ್ದರಿಂದ, ಆ ರಾತ್ರಿಯೇ ದಿಕ್ಕು ತಪ್ಪಿದವನಂತೆ, ಬಸ್‌ಸ್ಟಾಂಡಿಗೆ ಬಂದು ಆ ಸಮಯದಲ್ಲಿ ಹೊರಡಲಿದ್ದ ಒಂದು ಬಸ್ಸನ್ನು ಹತ್ತಿದ. ಕಂಡಕ್ಟರನಿಗೆ ಒಂದಿಷ್ಟು ಹೆಚ್ಚು ಹಣಕೊಟ್ಟು ಒಂದು ಸೀಟನ್ನು ಗಿಟ್ಟಿಸಿದ. ಬಸ್ಸುಬೊಂಬಾಯಿಗೆ ಹೊರಟಿತ್ತು ಎಂದು ಕುಳಿತ ಮೇಲೆ ತಿಳಿಯಿತು.

ಬೊಂಬಾಯಿನಲ್ಲಿ ತನ್ನ ಅನುಕೂಲಕ್ಕೆ ತಕ್ಕಂತಹ ಒಂದು ಒಳ್ಳೆಯ ಹೋಟೆಲಿನಲ್ಲಿ ಇಳಿದುಕೊಂಡ. ಚೆನ್ನಾಗಿ ಬಿಸಿನೆಸ್ಸು ನಡೆಸುವ ಗಣ್ಯರು ಬೇಜಾರು ಕಳೆಯಲು ಬಂದು ಇಳಿದುಕೊಳ್ಳು ತಾಣವದು. ಹೋಟೆಲ್ಲಿಗೆ ಅಂಟಿಕೊಂಡಂತೆ ಒಂದು ಬಾರ್, ಕ್ಲಬ್ಬು ಸಹ ಇತ್ತು. ಕುಡಿಯುವ ಮನಸ್ಸಿಲ್ಲದಿದ್ದರೂ ಎಷ್ಟೋ ವರ್ಷಗಳ ನಂತರ, ಬಾರ್‌ನ ಕಂಡು ಒಂದು ಪೆಗ್ ಹಾಕಿದರೆ ಏನೀಗ ಎಂದುಕೊಂಡು ಒಳಗೆ ಬಂದು ಕುಳಿತ.. ಮಂದವಾದ ಬೆಳಕಿನಲ್ಲಿ ಅತ್ತಿತ್ತ ನೋಡಿದ. ಬಾರ್ ಅಟೆಂಡರ್ ಬಂದು ಆರ್ಡರ್ ತೆಗೆದುಕೊಂಡ. ಮೂಲೆಯಲ್ಲಿನ ವೇದಿಕೆಯ ಮೇಲೆ ಆರ್ಕೆಸ್ಟ್ರಾದವರು ಯಾವುದೋ ಸಿನಿಮಾದ ಹಾಡಿನ ರಾಗವನ್ನು ನುಡಿಸತೊಡಗಿದ್ದರು. ಹಾಡಿನ ಲಯಕ್ಕೆ ತಕ್ಕಂತೆ ಇಬ್ಬರು ಹುಡುಗಿಯರು ಅರೆಬೆತ್ತಲೆ ಮೈಯನ್ನು ಕುಣಿಸುತ್ತಾ ನೃತ್ಯವನ್ನು ಪ್ರಾರಂಭಿಸಿದರು. ಇವನಿಗೆಕೋ ಅದನ್ನು ನೋಡುವುದು ಬೇಡವೆನಿಸಿತು. ಎದ್ದು ಹೋಗೋಣವೆಂದರೆ, ಆ ಅರೆಗತ್ತಲೆಯಲ್ಲಿ ಬಾಗಿಲು ಯಾವ ದಿಕ್ಕಿಗೆ ಇದೆ ಎಂದು ಸಹ ತಕ್ಷಣಕ್ಕೆ ತಿಳಿಯುವಂತಿರಲಿಲ್ಲ. ಅಕ್ಕ ಪಕ್ಕದ ಟೇಬಲ್‌ನವರು ಬೆರಗಾಗಿ, ಕಣ್ಣು ಬಾಯಿ ಬಿಟ್ಟುಕೊಂಡು, ಆ ಹೆಂಗಸರ ಕುಣಿತವನ್ನು ನೋಡುತ್ತಿದ್ದುದನ್ನು ಕಂಡು ಅಹಸ್ಯವೆನಿಸಿತು. 'ಥೂ ಈ ಹೆಂಗಸರು, ಹೊಟ್ಟೆಪಾಡಿಗಾಗಿ, ಈ ಕೊಳಕು ನೃತ್ಯದಿಂದ ಜನರ ಮನಸ್ಸನ್ನು ರಂಜಿಸುತ್ತಾರೆ... ಎಂದುಕೊಂಡು, ಆಗೊಮ್ಮೆ ಈಗೊಮ್ಮೆ ಅವರುಗಳ ಕಡೆ ನೋಡುತ್ತಾ ಸಮಯ ಕಳೆದ... ಕುಡಿಯುವ ಮನಸ್ಸಾಗಲಿಲ್ಲ.

ವೇದಿಕೆಯ ಮೇಲಿನ ದೀಪ ಝುಗ್ಗನೆ ಹತ್ತಿಕೊಂಡಾಗ ನರ್ತಿಸುತ್ತಿದ್ದವರು ಇಳಿದು, ಕುಳಿತಿದ್ದವರ ನಡುವೆ ಹಾದು ಹೋದರು. ವೈಯಾರವಾಗಿ ಮೈ ಬಳಕಿಸುತ್ತಾ ಕಿಲ ಕಿಲ ನಗುತ್ತಾ ಹೋದವರನ್ನೇ ಎಲ್ಲರೂ ನೋಡಿದರು. ಇವನೂ ಅತ್ತ ನೋಡಿದ. ಇದ್ದಕ್ಕಿದ್ದಂತೇ ಅವರಲ್ಲಿ ಒಬ್ಬಳು ತನಗೆ ಅತ್ಯಂತ ಪರಿಚಯದವಳು ಎನಿಸತೊಡಗಿತು ದಿನೇಶನಿಗೆ. ಕರೆದು ನಿಲ್ಲಿಸೋಣವೆನ್ನುವಷ್ಟರಲ್ಲಿ ಅವರಿಬ್ಬರೂ ಮರೆಯಾಗಿದ್ದರು. ಯಾರಿರಬಹುದು ? ಎಂದು ಎಷ್ಟು ಯೋಚಿಸಿದರೂ ತಕ್ಷಣ ಜ್ಞಾಪಕಕ್ಕೆ ಬರಲಿಲ್ಲ. ಆದರೂ ಅವಳ್ಯಾರು ತಾನು ತಿಳಿಸದವಳು ಎಂದು ತಿಳಿದುಕೊಳ್ಳಬೇಕೆಂಬ ಕುತೂಹಲ ಹೆಚ್ಚಾಯಿತು. ವೇದಿಕೆಯ ಮೇಲಿದ್ದ ಆರ್ಕೆಸ್ಟ್ರಾದವರೂ ತಮ್ಮ ತಮ್ಮ ವಾದ್ಯಗಳೊಡನೆ ಸರಂಜಾಮುಗಳೊಡನೆ ಹೊರಡಲು ಸಿದ್ಧರಾಗಿದ್ದರು.

ಬಾರ್‌ನ ಮಾಲೀಕನ ಬಳಿ ಹೋಗಿ ಕೇಳಲೇ ಎಂದುಕೊಂಡವನು, ಅವರುಗಳು ಸರಿಯಾಗಿ ಏನನ್ನು ತಿಳಿಸುವುದಿಲ್ಲ, ಅಲ್ಲದೇ ತಾನು ಹೋಗಿ ಅವಳು ಯಾರೆಂದು ಹೇಗೆ ಕೇಳುವುದು ? ಅಥವಾ ತಾನುಒಬ್ಬ ಗೂಢಚಾರನೇನೋ ಎಂದುಕೊಂಡು ತನಗೆ ಏನನ್ನು ತಿಳಿಸದೇ ಇರಬಹುದು.... ಮತ್ತೆ ಅವರಿಬ್ಬರನ್ನು ಕಾಣುವುದೇ ಸಾಧ್ಯವಾಗಲಾರದು. ಎಂದುಕೊಂಡು, ಇರಲಿ...... ನಾಳೆ ಮತ್ತೆ ಇದೇ ಸಮಯಕ್ಕೆ ಬಂದು ನೋಡ್ತೀನಿ ಎಂದುಕೊಂಡು ಅಲ್ಲಿಂದ ಹೊರಬಿದ್ದ.

ಆದರೆ ಮಾರನೇ ದಿನ ನರ್ತಿಸಿದವರು, ಬೇರೆ ಹುಡುಗಿಯರು. ಅವರಲ್ಲಿ ಒಬ್ಬರನ್ನ ಯಾರನ್ನಾದರೂ ಕೇಳಿದರೆ ಆಯಿತೆಂದುಕೊಂಡು ಕಾದ. ಆದರೆ ಅದಕ್ಕೆ ಅವಕಾಶವೇ ಆಗಲಿಲ್ಲ. ಎದ್ದು ಬಾರ್‌ನ ಮ್ಯಾನೇಜರ್‌ನ ಬಳಿಗೆ ಬಂದ.

''ನಾನು ಬೇರೆ ಊರಿನಿಂದ ಬಂದಿದೀನಿ. ನಾನೊಬ್ಬ ದೊಡ್ಡ ಎಸ್ಟೇಟ್‌ನ ಮಾಲೀಕ. ಒಬ್ಬನೇ ಕಾಲ ಕಳೆಯಲು ಕಷ್ಟವೆನಿಸುತ್ತದೆ. ನನಗೆ ಯಾರಾದರೂ ಸಂಗಾತಿ ಸಿಗ್ತಾರೆಯೇ?'' ಕೆಟ್ಟ ಧೈರ್ಯ ಮಾಡಿ ಕೇಳಿದ.

ಮ್ಯಾನೇಜರ್ ಅವನನ್ನೇ ವಿಚಿತ್ರವಾಗಿ ನೋಡಿದ. ನೋಡಿದರೆ ಯಾವ ಹೆಂಗಸನ್ನು ಮೆಚ್ಚಿಸುವಂತೆ ಇಲ್ಲ ಅಂತ ಎಂದುಕೊಂಡಿರಬಹುದು. ಹಣದಾಸೆಯನ್ನು ತೋರಿಸಿದರೆ, ಸರಿ ಹೋಗ್ತಾನೆ ಎಂದುಕೊಂಡು ''ಎಷ್ಟು ಹಣ ಕೇಳಿದರೂ ಕೊಡ್ತೀನಿ. ... ಆದರೆ ಹುಡುಗಿಯನ್ನು ನಾನು ಆರಿಸಿಕೊಳ್ಳಬೇಕು... ಅಂಥವರು ಎಲ್ಲಿರ್ತಾರೆ ?'' ಕೇಳಿದ.

''ಇಲ್ಲಿ ಅಂತಹ ಹುಡುಗಿಯರು ಯಾರೂ ಇಲ್ಲ...'' ಅವನೆಂದ.

''ಇಂತಹ ಸ್ಥಳಗಳಲ್ಲಿ ಅಂಥದ್ದೆಲ್ಲ ನಡೆಯುವುದಿಲ್ಲ ಎಂದರೆ ನಾನು ನಂಬುವುದಿಲ್ಲ. ಹೆದರಬೇಡಿ.. ನಾನು ಯಾವ ಬೇಹುಗಾರನೂ ಅಲ್ಲ. ಪೋಲೀಸಿನವನೂ ಅಲ್ಲ. ನಮ್ಮ ಹಳ್ಳಿಯಿಂದ ಬೊಂಬಾಯಿ ನೋಡಲು ಬಂದಿರುವ ಒಬ್ಬ ಮೂರ್ಖ'' ಎಂದು ಹೇಳಿಕೊಂಡು ನಕ್ಕ. ಅವನನ್ನೇ ಬೆಪ್ಪನಂತೆ ನೋಡಿದ ಆ ಮ್ಯಾನೇಜರ್.

ಅವನು ಮೊದಲಿಗೆ ಅನುಮಾನಿಸಿದರೂ, ಇವನು ಪದೇ ಪದೇ ಅದೇ ಮಾತುಗಳನ್ನಾಡಿದಾಗ, ''ಈಗ ಸಾಧ್ಯವಿಲ್ಲ. ಎಲ್ಲಾ ಹೊರಟುಹೋಗಿರುತ್ತಾರೆ. ಬೇಕಾದರೆ ನಾಳೆ ನೋಡೋಣ, ನಾಳೆ ಬನ್ನಿ'' ಎಂದಿದ್ದ ಹಲ್ಲು ಗಿಂಜುತ್ತಾ.

ಇವನಿಗೆ ನಿರಾಶೆಯೆನಿಸಿದರೂ ''ಇವತ್ತು, ನಿನ್ನೆ ನರ್ತಿಸಿದವರಲ್ಲಿ ಆ ಹುಡುಗಿಯರಲ್ಲಿ ಯಾರೇ ಆದರೂ ಸರಿ. ಅಥವಾ ಎಲ್ಲರೂ ಬಂದರೂ ಸರಿ... ಸುಮ್ಮನೆ ಸಮಯಕಳೆಯುಕ್ಕೆ ಅಂತ... ಎಷ್ಟು ಬೇಕಾದ್ರೂ ಅವರುಗಳಿಗೆ ಹಣವನ್ನು ಕೊಡ್ತೀನಿ.''

ಅವನು ಮತ್ತೆ ಇವನನ್ನು ವಿಚಿತ್ರವಾಗಿ ನೋಡಿದ. ಪೆದ್ದನಂತೆ ಕಂಡ. ವಿಚಿತ್ರವಾಗಿ ನಕ್ಕ. ''ಏನ್ಸಾರ್, ಸಮಯ ಕಳೆಯುಕ್ಕೆ ಒಬ್ಬರಿಗಿಂತ ಹೆಚ್ಚಿನ ಹುಡುಗಿಯರು ಏಕೆ ! ನಿಮ್ಮಂತಹವರ ಜತೆ ಒಬ್ಬರಿರುವುದೇ ಹೆಚ್ಚು ಅದೂ ಅನುಮಾನ'' ಎಂದ.

ಅವನ ಕಪಾಳಕ್ಕೆ ಎತ್ತಿ ಹೊಡೆಯುವ ಮನಸ್ಸಾದರೂ ತಡೆದುಕೊಂಡು ತುಟಿಕಚ್ಚಿ ನುಡಿದ. ''ಅದೆಲ್ಲ ನಿನಗೇಕೆ ! ನನ್ನ ಹತ್ತಿರ ಇರುವ ಹಣದಲ್ಲಿ ನಾನು ಒಟ್ಟಿಗೆ ಹತ್ತು ಜನರನ್ನು ನನ್ನ ಜತೆ ಇಟ್ಟುಕೊಳ್ಳಬಲ್ಲೆ. ಹೇಳಿದ್ನಲ್ಲ ಸಮಯ ಕಳೆಯಕ್ಕೆ ಅಂತ. ಅದು ನನ್ನ ಇಷ್ಟ ಯಾರೂ ಸಿಗದಿದ್ರೆ ಬೇರೆ ಕ್ಲಬ್‌ಗೆ ಹೋಗ್ತೀನಿ'' ಹೆದರಿಸಿದ.

''ನಿಮಗೆ ಮದುವೆಯಾಗಿದೆಯಾ? ಇದ್ದಕ್ಕಿದ್ದಂತೆ ಅವನು ಕೇಳಿದಾಗ ಅವನನ್ನೇ ನೋಡಿದ.''

"ಆಗಿದೆ... ಆಂ! ಇಲ್ಲ ಇಲ್ಲ"ಎಂದ ತಬ್ಬಿಬ್ಬುಗೊಂಡು."

"ಹೆಂಡತಿಯರಿಗೆ ಹೆದರೋರು ಈ ಆಸೆಯನ್ನೆಲ್ಲ ಇಟ್ಟುಕೋಬಾರದು. ಸುಮ್ಮನೆ ಯಾರೋ ಒಂದಿಬ್ಬರು ಹುಡುಗಿಯರ ಜತೆ ಸಮಯ ಕಳೆದೆ ಅಂತ ಎಂದರೆ ನಿಮ್ಮ ಹೆಂಡತಿ ನಂಬ್ತಾರಾ ?"

"ಇದನ್ನೆಲ್ಲ ಹೆಂಡತೀಗೆ ಯಾರು ಹೇಳ್ತಾರೆ! ಅಷ್ಟು ಗೊತ್ತಿಲ್ವಾ ?" ನಕ್ಕ.

"ಹಾಗಾದ್ರೆ ಧೈರ್ಯವಾಗಿ , ನನಗೊಬ್ಬಳು ಹುಡುಗಿ ಬೇಕು ಅಂತ ಸುಮ್ಮನೆ ಕೇಳಿ... ಅದಕ್ಕೆ ಈ ಬೊಂಬಾಯಿಯಲ್ಲಿ ಏನು ಕೊರತೆ! ಈ ಗೊಂದಲ ಯಾಕೆ ?"

"ಹಾಗಲ್ಲ ನನಗೆ ಯಾರೋ ಯಾವುದೋ ಹುಡುಗಿ ಬೇಕಿಲ್ಲ... ನಾನು ಆರಿಸಿ ಕೊಂಡವಳು ನಾನು ಕೇಳಿದವಳು... ಬೇರೆ ಯಾರೂ ಬೇಕಾಗಿಲ್ಲ"

"ಎಷ್ಟು ವಿಚಿತ್ರವಾಗಿ ಮಾತಾಡ್ತೀರಿ ಸಾರ್. ಅಂಥವರು ಯಾರೂ ಸಿಗುಲ್ಲ ಇಲ್ಲಿ. "

ಇವನು ಜೇಬಿನಿಂದ ಹಣದ ಕಟ್ಟನ್ನು ತೆಗೆದ. "ಹೌದು ನಾನು ವಿಚಿತ್ರ ಮನುಷ್ಯ , ವಿಚಿತ್ರ ಸ್ವಭಾವದವನು. ಏನೇ ಇರಲಿ. ಈ ಹಣ ವಿಚಿತ್ರವಲ್ಲ. ಇದರಲ್ಲಿ ಅರ್ಧ ನಿಮಗೆ ಕೊಡ್ತೀನಿ.... ಏನಂತೀರಿ ? " ಹಣದ ಕಂತೆಯನ್ನು ಅವನ ಮುಖದ ಮುಂದೆ ಆಡಿಸಿದ.

"ನಿಮಗೆ ಎಂತಹ ಹುಡುಗಿಬೇಕು ಅಂತ ಹೇಳಿ ಸಾರ್... " ವಿನಮ್ರನಾಗಿ ಕೇಳಿದ... "ಬಂದ ದಾರಿಗೆ ಎಂದುಕೊಂಡು.... " ನೆನ್ನೆ ಇಲ್ಲಿ ಇಬ್ಬರು ಡಾನ್ಸರ್ ಇದ್ದರಲ್ಲ. ಅವರಲ್ಲಿ ಒಬ್ಬಳು.... ತೆಳ್ಳಗೆ ಬೆಳ್ಳಗೆ ಇದ್ದಳಲ್ಲ ಅವಳು... ಅವಳೇಬೇಕು. ಮತ್ತೆ ಒತ್ತಿ ಹೇಳಿದ.

"ಅವಳು ಈಗ ಸಿಗುವುದಿಲ್ಲ ಸಾರ್. ಅವಳು ಮತ್ತೆ ಬರುವುದು ಮುಂದಿನವಾರವೇ.... ವಾರಕ್ಕೊಂದೇ ಸಲ ಈ ಹೋಟೆಲಿಗೆ ಬರುವುದು."

"ಉಳಿದಂತೆ ಎಲ್ಲಿರ್ತಾಳೆ ? ಎಲ್ಲಿ ಸಿಗ್ತಾಳೆ"

"ಏನೋ ಗೊತ್ತಿಲ್ಲ. ಅವಳ ವಿಚಾರ ಸಹ ನಮಗೆ ಸರಿಯಾಗಿ ತಿಳಿಯದು.... ಡಾನ್ಸ್ ಮುಗಿಸಿ ತಕ್ಷಣ ಮನೆಗೆ ಹೊರಟು ಹೋಗುತ್ತಾಳೆ."

"ಅವಳ ಹೆಸರೇನು ? ಅವಳ ಅಡ್ರೆಸ್ಸು ? ಗೊತ್ತಿದ್ದರೆ ಕೊಡ್ತೀರಾ ?"

"ಅಡ್ರೆಸ್ಸು ಕೊಡ್ತೀನಿ ಸಾರ್. ಆದರೆ ನಾನು ಕೊಟ್ಟೆ ಅಂತ ಮಾತ್ರ ಯಾರಿಗೂ ಹೇಳಬೇಡಿ. ಅವಳಿಗೆ ಮದುವೆಯಾಗಿದೆ. ಒಬ್ಬ ಮಗ ಸಹ ಇದಾನೆ. ಅವಳ ಹೆಸರು.... ಮಿಸೆಸ್ ರಂಜನ್... ನಮಗೆ ತಿಳಿದಿರುವಂತೆ ಅವಳು ಯಾವ ಗಂಡಸನ್ನು ಇದುವರೆಗೆ, ಈ ಹೋಟೆಲಿನಲ್ಲಿ... ಈರೀತಿ ... ಭೇಟಿ ಮಾಡುವುದಿಲ್ಲ, ಅವನು ಅಡ್ರೆಸ್ಸನ್ನ ಬರೆದು ಕೈಗಿತ್ತ. "

ಅವನ ಮಾತಿಗೆ ಗಮನ ಕೊಡದೇ 'ಥ್ಯಾಂಕ್ಸ್ ' ಎಂದಷ್ಟೇ ಹೇಳಿ ಅಡ್ರೆಸ್ಸನ್ನು ಓದಿಕೊಂಡ. ಫೋನು ನಂಬರು ಸಹ ಇದ್ದುದನ್ನು ಗಮನಿಸಿದ.

"ಈ ನಂಬರ್ರಿಗೆ ಫೋನು ಮಾಡಿ, ಈ ಕ್ಷಣ ಇಲ್ಲಿಗೆ ಬರುವಂತೆ ತಿಳಿಸಿ. ಬರದಿದ್ದರೆ ಆಮೇಲೆ ನೋಡೋಣ."

"ಗಂಡನ್ನ, ಮಗನ್ನ ಬಿಟ್ಟು ಈ ಹೊತ್ತಿನಲ್ಲಿ ಹೇಗೆ ಬರುತ್ತಾಳೆ! ಖಂಡಿತಾ ಸಾಧ್ಯವಿಲ್ಲ.... ನಾಳೆ ಬಾ ಅಂತ ಹೇಳ್ತೀನಿ."

"ಬೇಡ... ಯಾರೋ ಒಬ್ಬ ಲಕ್ಷಾಧೀಶ್ವರ, ಕೇಳಿದಷ್ಟು ಹಣವನ್ನು ಕೊಡಲು ತಯಾರಾಗಿದಾನೆ ಈ ಒಂದು ರಾತ್ರಿ... ಒಂದೇ ಒಂದು ರಾತ್ರಿ... ಗಂಡನಿಗೆ ತಿಳಿಯದಂತೆ ಏನಾದರೂ ನೆಪ ಹೇಳಿ ಬಾ ಅನ್ನಿ.... ಖಂಡಿತಾ ಬರುತ್ತಾಳೆ."

"ನಿಮಗೆ ಹೇಗೆ ಗೊತ್ತು....?"

"ಏನೋ ಹಾಗನ್ನಿಸುತ್ತೆ.... ಹಣವನ್ನು ಕೇಳಿದಷ್ಟು ಕೊಡ್ತೀನಿ. ಅವಳು ಈಗಲೇ ಬರುವಂತೆ ಮಾಡಿದರೆ, ನಿಮಗೂ ಒಂದಿಷ್ಟು ಕಮಿಷನ್... ಸಿಗುತ್ತೆ... ಏನಂತೀರಿ ? " ಅವನು ಹಲ್ಲುಕಿರಿದ.

ಇಷ್ಟೆಲ್ಲ ಮಾತನಾಡುವಾಗ, ಬಾರ್ ಖಾಲಿಯಾಗಿತ್ತು. ಅವನು ಡಯಲ್ ಮಾಡಿದ ದಿನೇಶ ಹೊರಗೆ ಬಂದು ಖಾಲಿಯಿದ್ದ ಕುರ್ಚಿಯ ಮೇಲೆ ಕುಳಿತು ಮಾತನಾಡುತ್ತಿದ್ದವನನ್ನೇ ಗಮನಿಸಿದ.

ಎಷ್ಟೋ ಹೊತ್ತು ಮಾತನಾಡಿದ ನಂತರ , ಬಾರ್‌ನ ಮ್ಯಾನೇಜರ್ ಇವನ ಬಳಿಗೆ ಬಂದ.... "ಬರುವುದಕ್ಕೆ ಒಪ್ಪಿಸಿದೆ. ನೀವು ನಿಮ್ಮ ರೂಮಿನಲ್ಲಿರಿ. ನಾನು ಅವಳನ್ನು ಅಲ್ಲಿಗೇ ಕರೆದುಕೊಂಡು ಬರ್ತೀನಿ."

ಏನನ್ನೋ ಸಾಧಿಸಿದವನಂತೆ ದಿನೇಶ ಅವನ ಕಡೆ ನೋಡಿ ನಕ್ಕು ಹೊರಬಂದು, ಪಕ್ಕದ ಮೆಟ್ಟಿಲುಗಳನ್ನು ಹತ್ತಿ ತನ್ನ ರೂಮನ್ನು ಸೇರಿಕೊಂಡ.

ಎಷ್ಟೋ ಹೊತ್ತು ಕಳೆದ ನಂತರ, ಬಾಗಿಲನ್ನು ಯಾರೋ ಬಡಿದಂತಾಯಿತು. "ಎಸ್ ಕಮಿನ್" ಎಂದ. ಬಾಗಿಲು ತೆಗೆದೇ ಇತ್ತು. ರೂಮಿನಲ್ಲಿದ್ದ ಮಂದವಾದ ಬೆಳಕಿನಲ್ಲಿ ಒಬ್ಬರನ್ನೊಬ್ಬರು ಗುರುತಿಸುವುದು ಸಾಧ್ಯವಿಲ್ಲವೇನೋ ... ಅನ್ನುವಂತಿತ್ತು ಚೆಲ್ಲಿದ್ದ ಬೆಳಕು. ಅವಳು ಒಳಗೆ ಬಂದೊಡನೆ "ಕೂತ್ಕೊಳ್ಳಿ ಮಿಸೆಸ್ ರಂಜನ್" ಎಂದ. ಅವಳು ಅವನು ನಿಂತಿದ್ದ ಕಡೆಗೆ ನೋಡುತ್ತಾ ನಿಧಾನವಾಗಿ ಕುಳಿತಳು. ಬಾರ್ ಮ್ಯಾನೇಜರ್‌ಗೆ ಹೋಗಬಹುದು ಎಂದು ಹೇಳಿ ಸಂಜ್ಞೆಮಾಡಿದ. ಅವನು ಹೊರಟುಹೋದ.

ಅವಳ ಕಡೆಗೆ ನೋಡುತ್ತಾ ಇದ್ದ ದಿನೇಶ, ಏನೂ ಮಾತನಾಡದೇ ಇದ್ದಾಗ ಅವಳಿಗೆ ಆ ಮೌನ ಅಸಹನೀಯವೆನಿಸಿತು.

"ಯಾಕೆ ನೀವು ಏನೂ ಮಾತನಾಡುತ್ತಿಲ್ಲ.... ನನ್ನನ್ನೇಕೆ ಕರೆಸಿದಿರಿ ? ಕೇಳಿದಳು. ನಾನು ಬೇಗ ವಾಪಸ್ಸು ಹೋಗ್ಬೇಕು...." ಧ್ವನಿ ನಡುಗುತ್ತಿತ್ತು

"ಡ್ಯಾನ್ಸ್ ಮಾಡ್ತೀರಾ ?" ಕೇಳಿದ.

ಅವಳು ಬೆಚ್ಚಿದಳು. "ಯಾರು ನೀವು? ಗಾಬರಿಯಿಂದ ಕೇಳಿದಳು."

"ಯಾಕೆ ಏನಾಯ್ತು! ಡ್ಯಾನ್ಸ್ ಮಾಡುಲ್ಲ ನೀವು ಅಂತ ನನಗೆ ಗೊತ್ತು. ಆರ್ಕೆಸ್ಟ್ರಾ ಇಲ್ಲ, ಅಡ್ರೆಸ್ ಇಲ್ಲ... ಹೋಗಲಿ ಬಿಡಿ, ನೀವ್ಯಾಕೆ ಈ ಪ್ರೊಫೆಷಸನ್ ಆರಿಸ್ಕೊಂಡಿದೀರಿ ಅಂತ ಹೇಳ್ತೀರಾ ? ಕೇಳಬಹುದಾ ?"

ಅವಳು ಮೌನಿಯಾದಳು. ಅವನೇ ಮಾತನಾಡಿದ.

"ಯಾರದೋ ಬಲವಂತದಿಂದ ಈ ಪ್ರೊಫೆಷನ್ ಆರಿಸ್ಕೊಂಡಿದೀರಿ ಅಂತ ಅನ್ನಿಸುತ್ತೆ. ಪರವಾಗಿಲ್ಲ, ಕಾರಣ ಹೇಳಿ. ನಾನು ನಿಮಗೆ ಸಹಾಯ ಮಾಡ್ತೀನಿ."

"ನನಗೆ ನಿಮ್ಮ ಸಹಾಯವೂ ಬೇಡ, ಹಣವೂ ಬೇಡ... " ತಿರಸ್ಕಾರದಿಂದ ಹೇಳಿದಳು.

"ಹಣದ ನೆರವಿಲ್ಲದೆ ಯಾರೂಏನನ್ನೂ ಮಾಡಲಾರರು. ಹಣ ನಿಮಗೆ ಬೇಡವಾಗಿರ ಬಹುದು. ಆದರೆ ನಿಮ್ಮ ಯಜಮಾನರಿಗೆ... ? ಹಣಕ್ಕಾಗಿ ತಾನೇ ನೀವು ಈ ಕೆಲಸ ಮಾಡುತ್ತಿರುವುದು....ನನಗೆ ಹಾಗೇ ಅನ್ನಿಸುತ್ತೆ."

"ನಿಮಗೆ ಏಕೆ ಅದೆಲ್ಲ.... ? ನನ್ನನ್ನೇಕೆ ಕರೆಸಿದಿರಿ ಅದನ್ನು ಹೇಳಿ."

"ಹುಂ" ಎದ್ದು ಇನ್ನೊಂದು ಜಾಗಕ್ಕೆ ಹೋಗಿ ಕುಳಿತ. "ನಾನೊಬ್ಬ ಲೇಖಕ. ಕಥೆ ಕಾದಂಬರಿ ಬರೆಯುತ್ತೇನೆ. ಕ್ಯಾಬರೆ ಡಾನ್ಸರ್ ಬಗ್ಗೆ ಒಂದು ಪಾತ್ರ ಚಿತ್ರಣ ಮಾಡಬೇಕಾಗಿದೆ. ಅದಕ್ಕೆ ವಾಸ್ತವ ಏನು ಅಂತ ತಿಳಿದುಕೊಳ್ಳೋಣ ಅಂತ ಕರೆಸಿದೆ." ತಡವರಿಸುತ್ತಾ ನುಡಿದ.

"ನಮ್ಮ ಕತೆ ಬರೆದು, ನಮಗೆ ಅಪಮಾನ ಮಾಡಬೇಕು ಅಂತಲಾ ?" ಆಕ್ರೋಶದಿಂದ ಕೇಳಿದಳು.

"ಇದರಲ್ಲಿ ಅಪಮಾನ ಏನು ಬಂತು? ಯಾರೊಬ್ಬರೂ ಹುಟ್ಟುತ್ತಲೇ ಕ್ಲಬ್ ಡಾನ್ಸರ್ ಆಗಿರುವುದಿಲ್ಲ. ಅದಕ್ಕೆ ಕಾರಣ.... ಏನೋ ಇರುತ್ತೆ ? ಹಿಂದೆ ಮುಂದೆ, ಏನು ಎತ್ತ ಅಂತ ತಿಳಿದುಕೊಂಡು, ಒಬ್ಬ ಹುಡುಗಿಯ ಪಾತ್ರಕ್ಕೆ ಜೀವವನ್ನು ತುಂಬೋಣ ಅಂತ ಅಷ್ಟೆ ಸ್ವಲಪ ವಿಷಯ ತಿಳಿಸಿ.

"ಇಲ್ಲ, ನಾನು ಈ ಬಗ್ಗೆ ಏನನ್ನೂ ಹೇಳುವುದಿಲ್ಲ."

"ಏಕೆ ಹೇಳುವುದಿಲ್ಲ! ಕಥೆ ಬರೆದು ಮುಗಿಸಿ, ಪುಸ್ತಕ ರೂಪದಲ್ಲಿ ಹೊರ ಬಂದಾಗ ನಿಮಗೂ ಸಂಭಾವನೆ ಅಂತ ಕೊಡ್ತೀವಿ. ... ಖಂಡಿತಾ, ಬೇಕಾದ್ರೆ ನಿಮ್ಮ ಹೆಸರನ್ನು ಹಾಕಿಸೋಣ."

"ಅದೆಲ್ಲ ನನಗೆ ಬೇಡ, ತಿಳಿದರೆ ನನ್ನ ಗಂಡ ಸುಮ್ಮನಿರುವುದಿಲ್ಲ. "

"ಪರ ಗಂಡಸರೆದುರು ಮೈ ಕುಣಿಸುವುದು ಅವರಿಗೆ ಸಮ್ಮತವೇ , ಸುಮ್ಮನೆ ಹೇಗೆ ಇದಾರೆ ?"

"ಇದೆಲ್ಲ ನಮ್ಮ ಸ್ವಂತ ವಿಷಯ. ನಾನೇಕೆ ಹೇಳಬೇಕು? ನಾನು ಹೋಗ್ತೀನಿ." ಎದ್ದು ನಿಂತಳು.

"ನೀನು ಎಷ್ಟು ಬೇಗ ಹೇಳಿ ಮುಗಿಸಿದರೆ, ನೀನು ಅಷ್ಟುಬೇಗ ಮನೆಗೆ ವಾಪಸ್ಸು ಹೋಗಬಹುದು" ಇದ್ದಕ್ಕಿದ್ದಂತೆ ಏಕವಚನದಲ್ಲಿ ಪ್ರಾರಂಭಿಸಿದ.

"ಇದಕ್ಕೆ ನನ್ನನ್ನು ಕರೆಸಿದಿರಾ ! ನಾನೇ ಏಕೆ ? ಇನ್ಯಾರೂ ಸಿಗಲಿಲ್ಲವೇ!"

"ನೆನ್ನೆ ದಿನ ನಿನ್ನ ಡಾನ್ಸನ್ನ ನೋಡಿದೆ. ನಿನ್ನನ್ನು ಮಾತನಾಡಿಸಿ ವಿಷಯವನ್ನು ತಿಳಿದುಕೊಳ್ಳಬೇಕು ಅಂತ ಅನ್ನಿಸ್ತು. ನೀನು ಇದೇ ಊರಿನವಳಾ ? ನಿನ್ನ ಗಂಡ ನಿನ್ನನ್ನು ಪ್ರೀತಿಸಿ ಮದುವೆಯಾದನೆ ! ಎಷ್ಟು ವರ್ಷದಿಂದ ಸಂಸಾರ ನಡೆಸುತ್ತಿದ್ದೀರಿ ? ಎಷ್ಟು ಮಕ್ಕಳು?.... ಸಂಪಾದನೆ ಹೇಗಿದೆ ?.... ಸಂಸಾರಕ್ಕೆ ಹಣ ಸಾಕಾಗುತ್ತಾ ?.... "

"ಇಲ್ಲ, ನಾನು ಏನನ್ನೂ ಹೇಳುವುದಿಲ್ಲ. ನಾನು ಅದನ್ನು ಯಾರಿಗೂ ಹೇಳುವುದಿಲ್ಲ."

"ಪರವಾಗಿಲ್ಲ. ಹೇಳು ನಾನು ಇನ್ಯಾರಿಗೂ ತಿಳಿಸುವುದಿಲ್ಲ. ರಹಸ್ಯವಾಗಿರುತ್ತೆ. "

"ಪ್ಲೀಸ್ ಬೇಡ. ಬೇಡ" ಬಿಕ್ಕಿ ಬಿಕ್ಕಿಅಳತೊಡಗಿದಳು.

"ಸರಿ, ಅಳಬೇಡ. ನೀನಿನ್ನು ಹೋಗಬಹುದು" ಎಂದು ಹೇಳಿ, "ನಾನು ನಾಲೆ ನಾಡಿದ್ದರಲ್ಲಿ ಊರಿಗೆ ವಾಪಸ್ಸು ಹೋಗ್ತೀನಿ. ಬಾರ್‌ನವರ ಹತ್ತಿರ ಹಣ ಕೊಡ್ತೀನಿ. ಕೇಳಿ ಇಸ್ಕೋ"ಎಂದು ಹೇಳಿ ಎದ್ದು ನಿಂತ. ಅವಳು ಎದ್ದು ಕಣ್ಣೀರನ್ನು ಒರೆಸಿಕೊಳ್ಳುತ್ತಾ ಹೊರಗೆ ನಡೆದಳು. "ಅಲಕಾ ನಿಲ್ಲು, ಹೋಗಬೇಡ" ಎಂದು ಕೂಗಿ ನಿಲ್ಲಿಸುವ ಮನಸ್ಸಾದರೂ ತಡೆದುಕೊಂಡ.

ನನ್ನನ್ನು ಅವಳು ಗುರುತಿಸಲಿಲ್ಲ. ಆದರೂ ತನ್ನ ಹಿಂದಿನ ಕತೆಯನ್ನು ನನಗೆ ತಿಳಿಸಲಿಲ್ಲ. ಆದರೆ ಬಿಕ್ಕಿ ಬಿಕ್ಕಿಅತ್ತದ್ದೇಕೆ ? ಗಂಡನ ಬೆದರಿಕೆಯೆ ? ಅಥವಾ ತಾನು ಅವಳಿಗೆ ಇಷ್ಟವಿಲ್ಲದ್ದನ್ನು ಮಾಡಿಸಲಿಲ್ಲವೆಂಬ ಕೃತಜ್ಞತೆಯೆ ? ಒಂದು ವೇಳೆ ನಾನು ಅವಳನ್ನು ಬಲವಂತ ಪಡಿಸಿದ್ದರೆ? ಏನಾಗುತ್ತಿತ್ತು ?

ಛೇ, ನಾನೇಕೆ ಹೀಗೆ ಚಿಂತಿಸುತ್ತೇನೆ. ತಾನು ಯಾವ ಹೆಂಗಸಿನೊಡನೆಯೂ ಹಾಗೆ ನಡೆದುಕೊಳ್ಳಲು ಸಾಧ್ಯವೇ ಇಲ್ಲ. ನನ್ನ ನಡತೆಯೇ ಅದು... ಈಗಲೂ ಹಾಗೆ, ಅವಳು ಒಬ್ಬಡಾನ್ಸರ್, ಅದಕ್ಕಿಂತ ಹೆಚ್ಚಾಗಿ ಒಂದು ಕಾಲದಲ್ಲಿ ತನ್ನ ಮಡದಿಯಾಗಿದ್ದವಳು. ತನಗೆ ದ್ರೋಹ ಬಗೆದವಳು. ಆ ರೋಷದಿಂದಲಾದರೂ, ತಾನೇಕೆ ಅವಳಿಗೆ ಏನನ್ನು ಮಾಡಲಿಲ್ಲ? ಏನೂ ಹೇಳಲಿಲ್ಲ? ಅವಳಿಗೆ ನಾನು ಯಾರೆಂದು ಸಹತಿಳಿಸಲಿಲ್ಲ? ಏಕೆ ? ಏಕೆ ?

ಅವಳು ತನ್ನಿಂದ ದೂರ ಹೋಗಿ, ಸುಖವಾಗಿದ್ದಾಳೋ ಇಲ್ಲವೋ ಅಂತ ಅದನ್ನು ಸಹ ತಿಳಿದುಕೊಳ್ಳಲಿಲ್ಲ. ಈಗ ತಿಳಿದು ಮಾಡುವುದೇನಿದೆ ? ಹೋಗಲಿ ಹೇಗಾದರೂ ಇರಲಿ. ತನಗೇನು ಎಂದುಕೊಂಡರೂ, ತನ್ನಿಂದ ದೂರ ಹೋದುದರ ಕಾರಣವನ್ನಾದರೂ ಕೇಳಬೇಕಾಗಿತ್ತೆನಿಸುತ್ತಿತ್ತು.

ಮತ್ತೆ ಅಲ್ಲಿ ಉಳಿದು ಏನುಸಾಧಿಸುವುದಿದೆ ಎನಿಸಿದ್ದರಿಂದ, ಮಾರನೇ ದಿನವೇ ಎಲ್ಲ ಸೆಟ್ಲ್ ಮಾಡಿ ಹೊರಟ. ಮರೆಯದೇ ಬಾರ್‌ನ ಮ್ಯಾನೇಜರರಿಗೆ ಹಣವನ್ನು ಕೊಟ್ಟು ಮಿಸೆಸ್ ರಂಜನ್‌ಗೂ ಕೊಡುವಂತೆ ತಿಳಿಸಿದ. ಒಂದು ಟ್ಯಾಕ್ಸಿಯನ್ನು ಹಿಡಿದು ಸೀದಾ ಏರ್‌ಪೋರ್ಟ್‌ಗೆ ಬಂದ. ಯಾರನ್ನೋ ಗೋಗರೆದು, ಅರ್ಜೆಂಟು ಎಂದು ತಿಳಿಸಿ ಒಂದು ಸೀಟನ್ನು ಪಡೆದ.

ಪ್ಲೇನ್ ಎತ್ತರಕ್ಕೆ ಹಾರಿದಾಗ, ಎತ್ತರದಲ್ಲೇ ಹಾಗೇ ಹಾರಾಡುತ್ತಿರಬೇಕು. ಭೂಮಿಗೆ ಇಳಿಯಲೇ ಬಾರದು ಎಂದು ಬಯಸಿದ.

ಏರ್‌ಪೋರ್ಟ್‌ನಿಂದ ಸೀದಾ ಅಣ್ಣನ ಮನೆಗೆ ಬಂದ. ಗೀತ ಸಂತೋಷದಿಂದ ಬರಮಾಡಿಕೊಂಡಳು. ಅವನು ನಡೆದ ವಿಷಯವನ್ನೆಲ್ಲಾ ತಿಳಿಸಿದ. ಅಲಕಳ ಬಗ್ಗೆ ಹೇಳುವಾಗ ನಾಲಿಗೆ ತೊದಲಿತು.

"ಅತ್ತಿಗೆ ನೀವೇ ಹೇಳಿ, ಒಂದು ಕಾಲದಲ್ಲಿ ನನ್ನ ಹೆಂಡತಿಯಾಗಿದ್ದವಳು, ಒಬ್ಬ ಡಾನ್ಸರ್ ಆಗಿದಾಳೆ ಎಂದರೆ ಹೇಗಾಗಿರಬೇಡ ನನಗೆ ! ಅಸಹ್ಯ ಅಂತ ಅನ್ನಿಸಿತು." ಕಹಿ ಮುಖ ಮಾಡಿದ.

"ಏಕೆ ಹೀಗೆ ಮಾಡಿದೆ ಅಂತ ಒದ್ದು ಕೇಳಬೇಕಾಗಿತ್ತು ನೀನು...."

"ಅವಳೀಗ ನನ್ನ ಹೆಂಡತಿ ಅಲ್ಲ, ಒಂದು ವೇಳೆ ಏನಾದರೂ ಗಲಾಟೆಯಾಗಿದ್ದರೆ, ಅಲ್ಲಿ ನನ್ನ ಸಹಾಯಕ್ಕೆ ಯಾರು ಬರುತ್ತಿದ್ದರು ? ಪೋಲೀಸರಿಗೆ ದೂರು ಕೊಡುತ್ತಿದ್ದರು. ಅಲ್ಲದೇ ಕೇಳಿ ತಾನೇ ಏನು ಪ್ರಯೋಜನ ? ಅವಳೇನು ನನ್ನ ಜತೆ ಬರುತ್ತಿರಲಿಲ್ಲ, ನಾನು ಕರೆಯುತ್ತಿದ್ದೆನೋ ಇಲ್ಲವೋ ? "

"ಹೋಗಲಿ ಬಿಡು... " ಗೀತ ಏನೋ ಹೇಳಲು ಉತ್ಸುಕಳಾಗಿರುವಂತೆ ಅನ್ನಿಸಿತು.

"ಹೋಗಲಿ ಇಲ್ಲಿಯ ವಿಷಯಗಳೇನು ?ಅಣ್ಣ ಹೇಗಿದಾನೆ?ಮಕ್ಕಳು ಹೇಗಿದಾರೆ?"

" ತಡಿ ನಿಧಾನವಾಗಿ ತುಂಬಾ ಮಾತನಾಡುವುದಿದೆ. ನಿಮ್ಮ ಅಣ್ಣ ಕಾಲೇಜಿಗೆ ಹೋಗಲಿ. ಒಂದು ರಾಶಿ ಕೆಲಸವಿದೆ " ಎಂದು ಹೇಳಿ ಒಳಗೆ ಹೋದಳು. ಸ್ನಾನ ಮುಗಿಸಿ, ಅಡಿಗೇ ಮನೆಗೇ ಬಂದು ಕೂತ. ಅವನಿಗೆ ಅಲ್ಲಿಯೇ ಕಾಫಿ ತಿಂಡಿ ಆಯಿತು. ಮಕ್ಕಳು, ಅಣ್ಣನ ಜತೆ ಹೊರಗೆ ಕಾಲಿಟ್ಟಕೂಡಲೇ, ಗೀತ ಕಾಫಿ ತಿಂಡಿಯ ತಟ್ಟೆ ಹಿಡಿದು ಅವನೆದುರಿಗೆ ಕುಳಿತಳು.

"ಈಗ ನೀನು ಒಂದು ತೀರ್ಮಾನಕ್ಕೆ ಬರಲೇಬೇಕು. ಯಾವುದಾದರೊಂದು ಒಳ್ಳೆಯ ಹುಡುಗಿನ ನೋಡ್ತೀನಿ. ನೋಡಿ ಒಪ್ಕೊ... ಬೇರೆ ಮಾತೇಬೇಡ ಮದುವೆಯಾಗು. "

"ಸದ್ಯಕ್ಕೆ ನನಗೆ ಮದುವೆ ಬೇಡವೇ ಬೇಡ" ನಿರಾಕರಿಸಿದ.

''ಹಾಗಾದರೆ ಹೀಗೆ ದೇಶಾಂತರ ತಿರುಗುತ್ತಾನೇ ಇರು'' ರೇಗಿದಳು.

''ಅದೇ ಚೆನ್ನ. ಹೊರಗಿನ ಪ್ರಪಂಚ, ನಮ್ಮ ಸಂಸಾರಕ್ಕಿಂತ ಚೆನ್ನಾಗಿದೆ. ''

''ಹೊರಗಿನ ಪ್ರಪಂಚವೂ ಚೆನ್ನಾಗಿಲ್ಲ. ನಿನಗೆ ಹಾಗೆನ್ನಿಸುತ್ತೆ ಅಷ್ಟೆ... ದೂರಕ್ಕೆ ಬೆಟ್ಟ ನುಣ್ಣಗೇ ಅಂತಾರೆ, ಹಾಗೆ ಪತ್ತಿರದ ಕಸಕಡ್ಡಿಗಳನ್ನು ದೂರಮಾಡಿ, ನಾವುಆದಷ್ಟು ಸರಿ ಮಾಡಿಕೊಳ್ಳಬೇಕು. .. ತಡಿ ಹೊರಗೆ ಏನೋ ಸದ್ದಾಯಿತು. ನೋಡಿಕೊಂಡು ಬರ್ತೀನಿ'' ಎನ್ನುತ್ತ ಎದ್ದು ಹೋದಳು. ದಿನೇಶ ರೂಮಿಗೆ ಹೋಗಿ ಹಾಸಿಗೆಯ ಮೇಲೆ ಉರುಳಿಕೊಂಡ. ಅತ್ತಿಗೆ ಹೊರಗೆ ಯಾರೊಡನೆಯೋ ಪಿಸುದನಿಯಲ್ಲಿ ಮಾತನಾಡುತ್ತಿರುವಂತೆ ಅನ್ನಿಸಿತು. ಅವರು ಹೋದ ನಂತರ ಬಂದು ಹೇಳಿದಳು.

''ಎಸ್ಟೇಟಿನ ಆಳು, ದಿನಾ ಬಂದು ವಿಚಾರಿಸುತ್ತಾನೆ. ನೀನು ಆಮೇಲೆ ಬರ್ತೀಯ ಅಂತ ಹೇಳಿ ಕಳಿಸಿದೆ. ಊಟ ಗೀಟ ಮಾಡಿ ಹೋಗೂವಂತೆ. ಈಗ ರೆಸ್ಟ್ ತಗೋ.''

''ಹೌದು, ಅವರಿಗೆಲ್ಲಾ ಸಂಬಳಾನೇ ಕೊಟ್ಟಿಲ್ಲ. ನಾನು ಹೋಗಲೇಬೇಕು. ಮೊದಲು ಬ್ಯಾಂಕಿಗೆ ಹೋಗಬೇಕು. ಅಡಿಗೇನ ಕ್ಯಾರಿಯರ್‌ಗೆ ಹಾಕಿಕೊಡಿ. ನಾನು ಅಲ್ಲಿಯೇ ಊಟ ಮಾಡ್ತೀನಿ... ''ಎನ್ನುತ್ತಾ ಹೊರಡಲು ಸಿದ್ಧನಾದ.

''ಒಂದು ದಿನ ಹೇಗಾದರೂ ಅಡ್ಜಸ್ಟ್ ಮಾಡಿಕೊಳ್ತಾರೆ ಬಿಡು. ಸಾಯಂಕಾಲ ನಿಮ್ಮ ಅಣ್ಣ ಬಂದಮೇಲೆ ಹೋಗೂವಂತೆ'' ಎಂದರೂ ಕೇಳದೇ ಹೊರಟ.

''ನಾಳೆ ನಾಡಿದ್ದರಲ್ಲಿ ಮತ್ತೆ ಬರ್ತೀನಿ'' ಅವನು ಬಸ್ಸಿನಲ್ಲಿ ಹೋಗಬೇಕಾಗಿತ್ತು. ಮೊದಲು, ಬ್ಯಾಂಕಿಗೆ ಹೋದ.. ಅಲ್ಲಿಂದ ತನ್ನ ಎಸ್ಟೇಟಿಗೆ ಹೋಗುವ ಬಸ್ಸು ಹಿಡಿದ.

ಎಸ್ಟೇಟಿನ ಮನೆಯ ಬಾಗಿಲಿನಲ್ಲಿ ಯಾರೋ ಕೂತಿರುವಂತೆ ಅನ್ನಿಸಿತು. ದೂರದಿಂದ ಯಾರೆಂದು ಗೊತ್ತಾಗದಿದ್ದರೂ ಹೆಂಗಸೆಂದು ತಿಳಿಯಿತು. ಇವನನ್ನುಕಂಡೊಡನೆ ಅವಳು ಎದ್ದು ನಿಂತಳು. ಸಂಧ್ಯಾ ! ಆಶ್ಚರ್ಯದಿಂದ ಉದ್ಗರಿಸಿದ. ಸರಸರನೆ ಮನೆಯ ಬಾಗಿಲನ್ನು ತೆಗೆದ. ಇವನ ಹಿಂದೆಯೇ ಅವಳೂ ಒಳಕ್ಕೆ ಬಂದಳು.

ಇಬ್ಬರೂ, ಒಬ್ಬರೆದುರಿಗೆ ಒಬ್ಬರು ಕೂತರು. ಅವಳು ಎಷ್ಟೋ ಹೊತ್ತಿನವರೆಗೂ ಮಾತನ್ನು ಪ್ರಾರಂಭಿಸದೇ ಏನನ್ನೋ ಯೋಚಿಸುತ್ತಿರುವಂತೆನಿಸಿತು. ಅವಳೇಕೆ ಬಂದಿರ ಬಹುದೆಂದು ಅವನು ಯೋಚಿಸುವುದೂ ಸಾಧ್ಯವಿರಲಿಲ್ಲ. ಸ್ವಲ್ಪ ಸಮಯದ ನಂತರ ತನ್ನ ಪರ್ಸಿನಿಂದ ಒಂದು ಪತ್ರವನ್ನು ತೆಗೆದು ಅವನ ಕೈಗಿತ್ತಳು.

ಇವನು ಅವಳ ಕಡೆಗೆ ನೋಡುತ್ತಾ ಪತ್ರವನ್ನು ಬಿಚ್ಚಿದ. ಅವಳಿಗೆ ಯಾರೋ ಬರೆದ ಕಾಗದ. ಅನುಮಾನದಿಂದ ಓದಲಾರಂಭಿಸಿದ.

ಸಂಧ್ಯಾ.....

ನನಗೆ ಎಲ್ಲಾ ತಿಳಿದಿದೆ. ನಿನ್ನ ಹತ್ತು ವರ್ಷದ ಬಯಕೆ ನೆರವೇರಲಿದೆ. ಅದಕ್ಕೆ ಕಾರಣ ನಾನಂತೂ ಅಲ್ಲ ಎನ್ನುವುದು ತಿಳಿದು ಹೋಗಿದೆ. ಒಂದು ಮಗುವಿನ ಆಸೆಗೆ ನೀನು ಈ ಮಟ್ಟಕ್ಕೆ ಇಳಿಯಬಹುದು ಅಂತ ಕನಸಿನಲ್ಲೂ ಅಂದುಕೊಂಡಿರಲಿಲ್ಲ. ನಿನ್ನ ಆಸೆಯನ್ನು ತೀರಿಸಿದ ಆ ವ್ಯಕ್ತಿ ಯಾರೆಂದು ತಿಳಿಯುವ ಬಯಕೆ ನನಗಿಲ್ಲ. ಹೆಣ್ಣಾಗಿ ನೀನೇ ಇಷ್ಟು ಮುಂದುವರೆದಿರುವಾಗ ನಾನು ಅವನನ್ನು ಏನಾದರೂ ಅನ್ನುವುದು ಅಪಹಾಸ್ಯವಾಗುತ್ತದೆ. ನನ್ನ ಆಸೆಗೆ ಒಪ್ಪಿ ಒಂದು ಮಗುವನ್ನು ದತ್ತು ತೆಗೆದುಕೊಂಡು, ಸಾಕಿದ್ದರೆ, ನಾವಿಬ್ಬರೂ ಗೌರವದಿಂದ ಬಾಳಬಹುದಾಗಿತ್ತು. ಆದರೆ, ಇನ್ನು ನಾವಿಬ್ಬರೂ ಒಟ್ಟಿಗೆ ಇರುವುದಂತೂ ಸಾಧ್ಯವಿಲ್ಲ. ನಿನಗೆ ಹೀಗೆ ಮಾಡು, ಹಾಗೆ ಮಾಡು ಅಂತ ಹೇಳುವ ಹಕ್ಕು ಈಗ ನನಗಿಲ್ಲ. ನಾನಾಗಿಯೇ ಆ ಹಕ್ಕನ್ನು ಹಿಂದಕ್ಕೆ ತೆಗೆದುಕೊಂಡಿದ್ದೇನೆ. ಇನ್ನು ಮುಂದೆ ನೀನು ನಿನ್ನ ಇಷ್ಟದಂತೆ ಬಾಳಬಹುದು. ನನ್ನ ಕಡೆಯಿಂದ ಯಾವ ತಕರಾರೂ ಇಲ್ಲ

- ರಾಜಣ್ಣ

ಅವನು ಕಾಗದ ಓದಿ ಮುಗಿಸಿ ಅವಳ ಕಡೆ ನೋಡಿದ. ಅವಳ ಮುಖ ವ್ಯಥೆಯಿಂದ ಕೂಡಿತ್ತೆನಿಸಿತು. ಏನೂ ಹೇಳಲು ತೋಚಲಿಲ್ಲ. ಕಾಗದವನ್ನು ಮಡಿಸಿಟ್ಟ.

"ಅವತ್ತು ಹೋದವರು ಇವತ್ತಿನವರೆಗೂ ವಾಪಸ್ಸು ಬಂದಿಲ್ಲ. ಎಲ್ಲಿಗೆ ಹೋದರೋ ನನಗೆ ತಿಳಿಯದು. ಈಗ ಏನು ಮಾಡಬೇಕು ಅಂತ ನನಗೆ ತೋಚುತ್ತಿಲ್ಲ" ಎಂದಳು.

ಅವಿವೇಕದಿಂದ ವರ್ತಿಸಿದರೆ ಆಗುವದೇ ಹೀಗೆ ಎಂದು ಅನ್ನಬೇಕೆಂದುಕೊಂಡರೂ ಅವಳ ಈ ಕೃತ್ಯದಲ್ಲಿ ತಾನೂ ಶಾಮೀಲಾಗಿದ್ದೇನೆ ಎನಿಸಿತು. ಅವಳನ್ನು ಸಂತೈಸಲು ಹೇಳಿದ. "ಎಲ್ಲಿದ್ದರೂ ಹುಡುಕಿಸ್ತೀನಿ. ನಿಮ್ಮದೇನೂ ತಪ್ಪಿಲ್ಲವೆಂದು ಹೇಳ್ತೀನಿ ಬೇಕಾದರೆ"

"ಸಿಕ್ಕಿದರೂ ನನ್ನನ್ನು ಜತೇಲಿ ಇಟ್ಟುಕೊಳ್ತಾರೋ ಇಲ್ಲವೋ ಅಂತ ಸಂದೇಹ... ನಾನೇಕೆ ಇನ್ನು ಬದುಕಿದೀನಿ ಅಂತ ಅನ್ನಿಸ್ತಿದೆ."

ಜೋರಾಗಿ ನಗಬೇಕೆನ್ನಿಸಿತು. "ಇದು ನೀವಾಗಿಯೇ ತಂದುಕೊಂಡ ವಿಪತ್ತು. ಈಗ ವ್ಯಥೆಯಾಗ್ತಿದೆ ಅಲ್ವಾ ? ನಿಮ್ಮಲ್ಲಿ ಬೆಳೆಯುತ್ತಿರುವ ಮಗುವಿಗಾಗಿ ಬದುಕಿದೀರಿ. ಬಯಸಿ ಬಯಸಿ ಸಮಾಜವನ್ನು ಎದುರಿಸಿ ಪಡೆಯುತ್ತಿರುವ ಮಗುವಲ್ಲವೆ ? ಈಗೆಂಥಾ ವ್ಯಥೆ ? " ಕಠಿಣವಾಗಿತ್ತು ಧ್ವನಿ.

"ಈ ಮಗು ನಿಮ್ಮದೂ ಸಹ. ಈಗ ನಾನೇನು ಮಾಡಬೇಕು ಅಂತ ನೀವೇ ಹೇಳಿ... ನನಗೆ ಏನೂ ತೋಚ್ತಿಲ್ಲ." ಅಸಹಾಯಕಳಂತೆ ಮುಖ ಮಾಡಿದಳು.

"ಆಗಲೇ ನನ್ನ ಮಾತನ್ನು ಕೇಳಿದ್ದರೆ ,ಈ ದಿನ ಈ ಪಾಡು ಒದಗುತ್ತಿರಲಿಲ್ಲ...ನಿಮಗೆ ಹೀಗೆ."

"ನೀವು ಹೀಗೆ ಹೇಳ್ತೀರಿ ಅಂತ ನನಗೆ ಗೊತ್ತಿತ್ತು. ಯಾವದಾದರು ಅಬಲಾಶ್ರಮಕ್ಕೆ ಹೋಗಿ ಬೀಳ್ತೀನಿ. ಅಥವಾ ಆತ್ಮಹತ್ಯೆ ಮಾಡಿಕೊಳ್ತೀನಿ. ಅದಕ್ಕೆ ಹೊಣೆಗಾರರು ನೀವೇ ಆಗ್ತೀರಿ."

"ಚೆನ್ನಾಗಿದೆ.. ನಾನು ಹೇಗೆ ಹೊಣೆಗಾರನಾಗ್ತೀನಿ! ನಾನು ಬಲತ್ಕಾರ ಮಾಡಿಲ್ಲ."

"ಇದೆಲ್ಲಾ ನನ್ನಿಂದ ತಪ್ಪಿಸಿಕೊಳ್ಳುವ ಯೋಚನೆ. ನಾನು ಬೀದಿಪಾಲಾಗಿ ಹೋದರೆ, ನಿಮ್ಮ ಮಗವೂ ಅನಾಥವಾಗುತ್ತೆ. ಅದು ನಿಮಗೆ ಇಷ್ಟವೆ?"

ಕಾನೂನಿನ ಪ್ರಕಾರ ನಿಮ್ಮವರೇ ಅದರ ತಂದೆ.... ನಾನಲ್ಲ ಸಾಕ್ಷಿ ಏನಿದೆ?" ಹೆಬ್ಬೆರಳನ್ನು ಎತ್ತಿ ಹಿಡಿದ.

"ಅವರು ನಿರಾಕರಿಸಿ ಆಯ್ತಲ್ಲ. ಇನ್ನು ನೀವೂ ನಿರಾಕರಿಸಿದರೆ, ಅದು ಹುಟ್ಟುವ ಮೊದಲೇ ನೆಗೆದು ಬೀಳುತ್ತೆ ಅಷ್ಟೇ... ಆತ್ಮ ಸಾಕ್ಷಿ ಅಂತ ಒಂದಿಲ್ವಾ?"

"ಎಲ್ಲಾ ಅಷ್ಟು ಸುಲಭವಲ್ಲ. ನಿಮ್ಮ ಮನಸ್ಸಲ್ಲಿ ಏನಿದೆ ಅಂತ ಹೇಳಿ ಸಾಕು." ಸುತ್ತಿ ಬಳಸಿ ಮಾತಾಡ್ಬೇಡಿ.

"ನೀವು ನನ್ನನ್ನ ಪ್ರೀತಿಸುತ್ತೀರಿ ಅಲ್ಲವೆ? ನಿಮ್ಮ ಮಗುವಿಗೆ ನೀವು ತಂದೆಯಾಗಬೇಕು.. ಅದರ ಪಾಲನೆ ಪೋಷಣೆಯ ಭಾರವನ್ನು ನೀವು ಹೊರಬೇಕು... ಆಗ ಎಲ್ಲಾ ನೇರವಾಗುತ್ತದೆ"

"ಎಷ್ಟು ಸುಲಭವಾಗಿ ಹೇಳ್ತೀರಿ ಸಂಧ್ಯಾ ? ನಿಮ್ಮವರು ಎಷ್ಟು ಸುಲಭವಾಗಿ ಎಲ್ಲವನ್ನೂ ಕಳಚಿಕೊಂಡರು. ಒಂದು ವೇಳೆ ನಾನೂ ಒಪ್ಪದಿದ್ದರೆ?"

"ನೀವು ಒಪ್ತೀರಿ ಅಂತ ನನ್ನ ಒಳ ಮನಸ್ಸು ಹೇಳಿದ್ದರಿಂದಲೇ ನಾನು ಇಲ್ಲಿಗೆ ಬಂದೆ.... ಮಗುವಾಗುವವರೆಗೆ ನಾನು ಇಲ್ಲಿ ಇರ್ತೀನಿ. ಆಮೇಲೆ ಎಲ್ಲಿಗಾದರೂ ಹೊರಟು ಹೋಗ್ತೀನಿ.... ಹುಟ್ಟಲಿರುವ ಮಗುವಿಗಾದರೂ ಆಸರೆಯನ್ನು ಕೊಡಿ." ಅದನ್ನು ನೀವೇ ಬೆಳೆಸಿ.

"ಮಗುವನ್ನು ಬಿಟ್ಟು! ನೀವೇಂಥಾ ತಾಯಿ? ಇಷ್ಟಕ್ಕಾಗಿ' ಮಗುವನ್ನು ಬಯಸಿದ್ರಾ?"

"ಮತ್ತೇನು ಮಾಡಲಿ? ಈಗ ನನಗೆ ಆಸರೆ ಇಲ್ಲವಾಗಿದೆ. ಎಡವಟ್ಟಾಗಿದೆ."

"ಒಂದು ಷರತ್ತಿನ ಮೇಲೆ ನೀವು ಇಲ್ಲಿ ಇರಬಹುದು. ಆ ಮನೆಗೆ ಸಂಬಂಧಿಸಿದ ಯಾವ ವಸ್ತುವನ್ನು ನಿಮ್ಮ ಜತೆಯಲ್ಲಿ ತರಕೂಡದು. ಒಂದು ಬಟ್ಟೆ ತುಂಡು ಸಹ ತರಬಾರದು. ಇದಕ್ಕೆ ಒಪ್ಪಿದರೆ ಈ ಕ್ಷಣದಿಂದ ನೀವು ಇಲ್ಲಿ ಇರಬಹುದು."

ಅವಳು ಯಾವ ಕಾರಣದಿಂದಲೋ, ಅಳತೊಡಗಿದಾಗ ಅವನಿಗೆ ಅಯ್ಯೋ ಎನಿಸಲಿಲ್ಲ. ಹೆಂಗಸರ ಸ್ವಾರ್ಥತೆಯ ಬಗ್ಗೆ ಜಿಗುಪ್ಸೆ ಮೂಡಿತು. ಹಿಂದಿನ ದಿನ ಅಲಕಾಳ ಸ್ವಾರ್ಥತೆಯನ್ನು ಗಮನಿಸಿ ಬೇಸರಗೊಂಡಿದ್ದ. ಈಗ ಇವಳು... ಹಾಗಾದರೆ ತನಗೆ, ನಿಸ್ವಾರ್ಥವಾಗಿ ಒಲಿಯುವ ಯಾವ ಹೆಣ್ಣೂ ಇಲ್ಲವೇ ಅಂತ ಎನಿಸಿದಾಗ ಮನಸ್ಸು ಖಿನ್ನಗೊಂಡಿತು.

"ನಾನು ಈಗ ಮನೆಗೆ ಹೋಗಿ ನಾಳೆ, ಬರ್ತೀನಿ" ಎಂದು ಹೇಳಿ ಎದ್ದಳು.

"ತಗೊಳ್ಳಿ ಇಲ್ಲಿ ಒಂದಿಷ್ಟು ಹಣವಿದೆ. ತಕ್ಷಣಕ್ಕೆ ಅಗತ್ಯವಾದ ಬಟ್ಟೆ ಇತ್ಯಾದಿಯನ್ನು ತೆಗೆದುಕೊಳ್ಳಿ. ನಾಳೆ ದಿನ ನಮ್ಮ ಅಣ್ಣನ ಮನೆಗೆ ಬನ್ನಿ. ನಾನೂ ಅಲ್ಲಿಗೆ ಬಂದಿರುತ್ತೀನಿ. ಅಲ್ಲಿ ಮುಂದಿನ ಮಾತನಾಡೋಣ..."

"ನಿಮ್ಮ ಅಣ್ಣ ಅತ್ತಿಗೆಗೂ ಈ ವಿಷಯ ತಿಳಿಯಬೇಕೇ ? ತಿಳಿಸದೇ ಇದ್ದರೆ ಏನಾಗುತ್ತೆ?"

"ನಾನು ನನ್ನ ಅತ್ತಿಗೆಗೆ ತಿಳಿಸದೇ ಇರುವ ವಿಷಯವೇ ಇಲ್ಲ... ಅವರು ನನ್ನ ತಾಯಿಯ ಸಮಾನ. ಅವರಿಗೆ ಎಲ್ಲಾ ತಿಳಿಯಲೇ ಬೇಕು. "

ಅವಳು ಕೆಟ್ಟ ಮುಖ ಮಾಡಿದ್ದನ್ನು ಗಮನಿಸಿದ . "ನನ್ನ ಅತ್ತಿಗೆ ತುಂಬಾ ಒಳ್ಳೆಯವರು. ನನ್ನ ಸೋದರ ಮಾವನ ಮಗಳು... ಮೊದಲಿನಿಂದ ನನಗೆ ತಾಯಿಯ ವಾತ್ಸಲ್ಯವನ್ನು ತೋರಿದ್ದಾರೆ. ಅವರಿಗೆ ತಿಳಿಸದೇ ಏನೂ ಮಾಡುವವನಲ್ಲ ನಾನು."

"ಆಗಲಿ" ಎಂದಳು. "ಬನ್ನಿ ನಾನು ನಿಮ್ಮನ್ನು ನಿಮ್ಮ ಮನೆಗೆ ಬಿಟ್ಟು ಬರ್ತೀನಿ" ಅವನು ಎದ್ದು ಕಾರಿನ ಕಡೆ ನಡೆದಾಗ, ಅವಳು ವಿಚಿತ್ರವಾದ ಭಾವನೆಗಳಲ್ಲಿ ಮುಳುಗಿದ್ದಳು.

ತೋಟದ ಆಳುಗಳನ್ನು ಕರೆದು, ಸಂಜೆಗೆ ಬನ್ನಿ ಎಂದು ಹೇಳಿ ಕಾರನ್ನು ಹತ್ತಿದ. ಅವಳನ್ನು ಅವಳ ಮನೆಯ ಹತ್ತಿರ ಬಿಟ್ಟು, ಅಣ್ಣನ ಮನೆಗೆ ಬಂದ. ಬೆಳಿಗ್ಗೆ ಹೋದವನು ಮತ್ತೆ ಸಾಯಂಕಾಲದ ಹೊತ್ತಿಗೆ ಬಂದದ್ದನ್ನು ಕಂಡು ಗೀತ ಗಾಬರಿಯಾದಳು. ಆದರೂ ಏನನ್ನೂ ಪ್ರಶ್ನಿಸಲಿಲ್ಲ. ಅಡಿಗೆ ಮನೆ ಸೇರಿದವರು ಇಬ್ಬರೂ ಪಿಸು ದನಿಯಲ್ಲಿ ಮಾತನ್ನಾಡಿ ಕೊಂಡರು. ಸ್ವಲ್ಪ ಸಮಯದ ನಂತರ ಹೊರಗೆ ಬಂದರು. ಮಕ್ಕಳಿಬ್ಬರೂ ಹೊರಗೆ ಆಟ ಆಡುತ್ತಿದ್ದರು.

"ದಿನೇಶ ಮದುವೆಗೆ ಒಪ್ಪಿದಾನೆ..." ಗೀತ ಉತ್ಸಾಹದಿಂದ ನುಡಿದಾಗ, ಗಂಡ ಬೆರಗಾದ. ದಿನೇಶ ಸಹ ಅವಳ ಚಾಕಚಕ್ಯತೆಗೆ ಬೆರಗಾದ. ಆದರೂ ಏನೋ ಚಿಂತೆ.

"ಯಾವಾಗ ಮದುವೆ ?" ಬೇಕಂತ ಕೇಳಿದ. ಗಂಡನ ಕಡೆ ನೋಡಿ ನಸುನಕ್ಕಳು.

"ನಾಳೇನೆ" ಎಂದಳು ತಡವರಿಸದೇ...

"ಮದುವೆ ಎಲ್ಲಿ? ನಾನು ರಜೆ ಹಾಕಿ ಬರಬೇಕೋ ಬೇಡವೋ? ಅವರಸವೇನು?" ಬೇಕಂತ ಕೇಳಿದ.

"ನಿಮ್ಮ ಸ್ಟೂಡೆಂಟೇ . ಸಂಧ್ಯಾ ಅಂತ. ಅವತ್ತು ಆಸ್ಪತ್ರೇಲಿ ಸಿಕ್ಕಿದ್ದಳಲ್ಲ ಅವಳು. ಅರ್ಜೆಂಟಿದೆ" ಎಂದಳು.

ದಿನೇಶನಿಗೆ ಅಲ್ಲಿಯೇ ನಿಂತು ಮಾತುಗಳನ್ನು ಕೇಳಿಸಿಕೊಳ್ಳುವ ಇಚ್ಛೆಯಾಗಲಿಲ್ಲ. ಮಕ್ಕಳ ಆಟವನ್ನು ನೋಡುವ ನೆವದಲ್ಲಿ ಹೊರಕ್ಕೆ ಬಂದ. ಗೀತ ಅವನೊಡನೆ ಏನು

ಹೇಳಿದಳೋ ಇವನಿಗೆ ತಿಳಿಯಲಿಲ್ಲ. ಅಣ್ಣ ಮತ್ತೇನೂ ಕೇಳಲಿಲ್ಲ. ಕಣ್ಣಿನಲ್ಲೇ ಅತ್ತಿಗೆಗೆ ಕೃತಜ್ಞತೆ ತಿಳಿಸಿ ಮೆಲುದನಿಯಲ್ಲಿ ಕೇಳಿದ.

''ಮದುವೆ ಮಾಡಿಕೊಳ್ಳದೇ ಹಾಗೆ ಇದ್ದರೆ ಆಗುಲ್ವಾ ?''

''ಥೂ ಅಷ್ಟು ಕೀಳಾಗಿ ಯೋಚಿಸಬೇಡ. .... ಯಾವುದೋ ಕಾರಣದಿಂದ ಅವಳು ತಾನಾಗಿಯೇ ನಿನ್ನ ಬಳಿಗೆ ಬಂದಿದಾಳೆ.ನೀನು ಅವಳನ್ನು ಪ್ರೀತಿಸ್ತಿದೀನಿ ಅಂತ ಅಂದೆ. ಇದೇನಾ ನಿನ್ನ ಪ್ರೀತಿ.... ? ಹಾಗೇ ಇರೋಕೆ ಆಗುತ್ತಾ? ಮರ್ಯಾದೆ ಇರುತ್ತಾ?''

''ಅಲಕಾನ್ನ ಅಲ್ಲಿ ಕಂಡ ಮೇಲೆ ನನ್ನ ಮನಸ್ಸೇ ಕೆಟ್ಟು ಹೋಗಿದೆ.''

''ಅವಳು ನಿನ್ನನ್ನು ಬಿಟ್ಟು ಹೋದಳು. ಅವಳ ಪಾಡಿಗೆ ಅವಳಿದಾಳೆ. ನಿನಗೇಕೆ ಇನ್ನು ಅವಳ ಚಿಂತೆ ? ಸಂಧ್ಯಾನ್ನ ನೀನು ಪ್ರೀತಿಸ್ತೀಯ... ಆ ಮಗು ನಿನ್ನದೇ ಅಂತ ನೀನೇ ಹೇಳಿದೀಯ.... ಇನ್ನೇಕೆ ಅನುಮಾನ? ನೀನು ಒಳ್ಳೆ ಗುಣ ನಡತೆಯವನು, ಯಾವುದೋ ಒಂದು ಹೆಣ್ಣಿನ ಜತೆ, ಎಸ್ಟೇಟಿನಲ್ಲಿ ಹಾಗೆ ಇದ್ದರೆ, ಎಲ್ಲರೂ ನಿನ್ನನ್ನು ಆಡಿಕೊಳ್ಳುವುದಿಲ್ಲವೆ! ಇಂತಹಕೆಟ್ಟ ಆಲೋಚನೆ ನಿನಗೇಕೆ ? ಅವಳಿಗೀಗ ನಿನ್ನ ಅಗತ್ಯವಿದೆ. ಅದು ನ್ಯಾಯ ಬದ್ಧವಾಗಿರಬೇಕು. ''

''ಕಾನೂನಿನ ಪ್ರಕಾರ ಅವಳಿನ್ನು ಅವನ ಹೆಂಡತಿಯೇ! ಡೈವೋರ್ಸ್ ಆಗಿಲ್ಲವಲ್ಲ.''

''ಅವನೇ ಬರೆದುಕೊಟ್ಟೀದಾನಲ್ಲ... ಮದುವ ಅಂತ ಒಂದಾಗಿದ್ದರೆ ಧೈರ್ಯವಾಗಿ ಎಲ್ಲದನ್ನು ಎದುರಿಸಬಹುದು. ಅವಳನ್ನು ಒಂದು ಮಾತು ಕೇಳಿದೀಯಾ ತಾನೇ ?''

''ನೀವೇ ಅವಳಿಗೆ ಹೇಳಿಬಿಡಿ. ಅವಳ ಮನಸ್ಸಲ್ಲಿ ಏನಿದೆಯೋ ?''

''ಇನ್ನೇನಿರುತ್ತೆ! ಅವಳಿಗೂ ರಕ್ಷಣೆ ಬೇಡವೇ ? ಒಪ್ಪದೇ ಏನು ಮಾಡ್ತಾಳೆ ?''

''ಅತ್ತಿಗೆ ನನ್ನ ಬಗ್ಗೆ ನಿಮಗೆ ಬೇಜಾರೇನಿಲ್ಲ ತಾನೆ! ಅಣ್ಣನಿಗೆ ಸಿಟ್ಟು ಇಲ್ವಾ ?''

''ಬೇಜಾರೇಕೆ ಯಾವುದೋ ನೆವದಲ್ಲಿ ಮತ್ತೆ ಸಂಸಾರಿಯಾಗ್ತಿದೀಯಲ್ಲ ಅಂತ ಸಂತೋಷವಾಗ್ತಿದೆ. ಇದುವರೆಗೂ ಒಂಟಿಯಾಗಿದ್ದುದೇ ತಪ್ಪು. ಯಾರಿಗೂ ಸಿಟ್ಟಿಲ್ಲ. ''

''ನಿಮ್ಮ ಮಾತಿಗೆ ಒಪ್ಪಿ ಅವಳನ್ನ ಮದುವೆಯಾಗ್ತೀನಿ. ಆಮೇಲೇನಾದರೂ ಹೆಚ್ಚು ಕಡಿಮೆಯಾದರೆ ನೀವೇ ಜವಾಬ್ದಾರರು ಈಗ್ಲೇ ಹೇಳ್ತಿದೀನಿ.''

''ಥೂ ಹೋಗೋ... ಈಗಲಿಂದ ಏನೇನೋ ಯಾಕೆ ಯೋಚಿಸಬೇಕು ? ನೀನೀಗ ಅವಳನ್ನು ಮದುವೆಯಾಗದಿದ್ದರೆ ಅವಳ ಬಾಳು ಏನಾಗುತ್ತೋ ಹೇಳುವುದಕ್ಕಾಗುವುದಿಲ್ಲ. ಅಲ್ಲದೇ ನೀನೂ ಮತ್ತೆ ಹೊಸ ಜೀವನ ಪ್ರಾರಂಭಿಸಿದಂತಾಗುತ್ತದೆ. ಅಲ್ಲದೇ ಈ ಮನೆಗೆ ಒಂದು ಹೊಸ ಜೀವ ಬರಲಿದೆ.ಅದು ನಿಮ್ಮದಲ್ಲವೇ ? ನೀನು ಏನೂ ಚಿಂತಿಸಬೇಡ. ಎಲ್ಲಾ ಸರಿಹೋಗುತ್ತದೆ . ಏನಾದರೂ ಸೀರೆ ರವಿಕೆ ತರುವ ವಿಚಾರವಿದ್ದರೆ ಈಗ ಹೋಗಿ ಬರೋಣ. ವಾಪಸ್ಸು ಬಂದು ಆಮೇಲೆ ಮಾತನಾಡೋಣ. ಈಗ ಏಳು.''

"ಅವಳಿಗೆ ದುಡ್ಡು ಕೊಟ್ಟಿದೀನಿ. ಅವಳು ಹೊಸಾ ಸೀರೆ ರವಿಕೆ ತೊಟ್ಟು ಬರಬೇಕು ಅಲ್ಲಿಯ ಹಳೆಯದನ್ನೆಲ್ಲ ಬಿಟ್ಟು ಬರಬೇಕು... ಅಂತ ಹೇಳಿದೀನಿ."

"ಅದೆಲ್ಲ ನಿದಾನವಾಗಿ ಮಾಡಿದ್ದರಾಗುತ್ತಿತ್ತು.ಒಂದೆರಡು ಜತೆ ಹೊಸ ಸೀರೆ ಇತ್ಯಾದಿ ನಾವೂ ತಂದಿಡ್ತೋಣ. ನಡೀ ಹೊರಡು" ಗೀತ ಹೊರಡಿಸಿದಳು.

ಮಾರನೇ ದಿನ ಅಣ್ಣ ಗೀತನ ಮಾತಿಗೆ ಒಪ್ಪಿ ಕಾಲೇಜಿಗೆ ರಜ ಹಾಕಿ ಮನೆಯಲ್ಲಿಯೇ ಉಳಿದ. ಮಕ್ಕಳಿಬ್ಬರು ಮಾತ್ರ ಸ್ಕೂಲಿಗೆ ಹೋಗಿದ್ದರು. ಗೀತ ಅಡಿಗೆ ಕೆಲಸವನ್ನೆಲ್ಲ ಮುಗಿಸಿ, ಎಷ್ಟೋ ಬಾರಿ ಹೊರಬಾಗಿಲಿನಲ್ಲಿ ಬಂದು ಇಣುಕಿ ನೋಡಿದ್ದಳು. ಎಲ್ಲರಿಗೂ ಕಾದೂ ಕಾದೂ ಸಾಕಾಗಿದೆ ಅಂತ ಎನಿಸಿದಾಗ, ಸಂಧ್ಯಾ ಬಂದಳು. ಅವಳ ಮುಖದಲ್ಲಿ ಏನೋ ಉದಾಸೀನತೆ ಇದ್ದುದನ್ನು ಗೀತ ಗಮನಿಸಿದಳು. ದಿನೇಶನೂ ಸಹ ಉಲ್ಲಾಸದಿಂದಿರಲಿಲ್ಲ. ಗೀತ ತಾನೇ ನಸುನಗುತ್ತಾ ಎಲ್ಲರನ್ನೂ ಉಪಚರಿಸಿ, ತಿಂಡಿ ಕಾಫಿ ಕೊಟ್ಟಳು. ನಂತರ ಸಂಧ್ಯಾಳನ್ನು ತನ್ನ ರೂಮಿಗೆ ಕರೆದೊಯ್ದಳು.

"ಸಂಧ್ಯಾ ಆಗಿದ್ದು ಆಗಿ ಹೋಯ್ತು. ದಿನೇಶ ಎಲ್ಲಾ ಹೇಳಿದಾನೆ. ಎಷ್ಟೋ ಜನ ಹೆಂಗಸರು ಯಾವುದೋ ಕಾರಣದಿಂದ ಮರುಮದುವೆಯಾಗುವುದಿಲ್ಲವೇ ! ಹಾಗೇ ಅಂತ ಭಾವಿಸು. ಆದರೆ ಸ್ವಲ್ಪ ಗೆಲವಾಗಿರು. ಪಾಪ ದಿನೇಶನೂ ಸುಖವಾಗಿರಲಿಲ್ಲ. ಅವನನ್ನು ಇನ್ನು ಮುಂದೆ ಸುಖವಾಗಿ ಚೆನ್ನಾಗಿ ನೋಡಿಕೊಳ್ಳುವುದು ನಿನ್ನ ಧರ್ಮ..."

ಅವಳು ಮಾತನಾಡಲಿಲ್ಲ.

"ನಿನಗೆ ಮನಸ್ಸಿಲ್ಲದಿದ್ದರೆ ಬೇಡ ಬಿಡು. ಬಲವಂತ ಮಾಡುವುದಿಲ್ಲ. ಆದರೆ ನೀವು ನೀವು ನಮ್ಮ ಮನೆಯಲ್ಲಿ ಹಾಗೇ ಸ್ನೇಹಿತರಂತೆ ಇರುವುದು ಸಾಧ್ಯವಿಲ್ಲ. ನಿನ್ನ ಮೇಷ್ಟ್ರು ಇದಕ್ಕೆ ಸುತಾರಾಂ ಒಪ್ಪುವುದಿಲ್ಲ. ಅಲ್ಲದೇ ಹುಟ್ಟುವ ಮಗುವಿಗೆ ಒಂದು ರಕ್ಷಣೆ ಬೇಡವೇ! ಜನ ಆಡಿಕೊಳ್ಳುವಂತಾಗಬಾರದು. .... ಯೋಚಿಸಿದೀಯ ತಾನೆ ?"

"ಸ್ವಲ್ಪ ಸಮಯಕೊಡಿ. ನಾನು ಯೋಚಿಸಬೇಕು"

"ಯೋಚಿಸುವುದಕ್ಕೇನಿದೆಯೋ ನನಗೆ ತಿಳೀದು... ದುಡುಕಿ, ದಿನೇಶನ್ನ ನಿನ್ನ ಅಗತ್ಯಕ್ಕೆ ಬಳಸಿಕೊಂಡೆ. ತಪ್ಪೆಲ್ಲಾ ನಿನ್ನದೇ. ಈಗ ಯೋಚಿಸಿ ಏನು ಉಪಯೋಗ ? ನಾವೆಲ್ಲಾ ತೀರ್ಮಾನಿಸಿ ಆಗಿದೆ... ದಿನೇಶ ನಿನ್ನನ್ನ ಚೆನ್ನಾಗಿ ನೋಡಿಕೊಳ್ತಾನೆ. ನೀನು ಹೆದರಬೇಡ. "

ಅವಳ ಮಾತಿಗೆ ತಲೆ ಆಡಿಸಿದಳು. ಸಂಧ್ಯಾ ಅದಕ್ಕೇ ಕಾಯುತ್ತಿದ್ದಂತೆ ಗೀತ ದೇವರ ಮನೆಗೆ ಹೋಗಿ , ದೇವರ ಮುಂದೆ ತುಪ್ಪದ ದೀಪಗಳನ್ನು ಹಚ್ಚಿದ್ದಳು. ಎರಡು ಮಣೆಯನ್ನು ಹಾಕಿ, ಸಂಧ್ಯಾ ದಿನೇಶರನ್ನು ಕೂಡಿಸಿ, ಹಣೆಗೆ ಕುಂಕುಮವನ್ನಿಟ್ಟಳು. ತಾನು ಈ ಮೊದಲೇ ತೆಗೆದಿರಿಸಿದ್ದ ಸೀರೆ ರವಿಕೆಗಳನ್ನು, ಒಂದೆಳೆ ಸರಕ್ಕೆ ಲಕ್ಷ್ಮಿ ಕಾಸನ್ನು ಸೇರಿಸಿ ಸಂಧ್ಯಾಳ ಕೈಗಿತ್ತಳು. "ಈ ಸೀರೆಯನ್ನುಟ್ಟು ರವಿಕೆ ತೊಟ್ಟು, ಈ ಸರವನ್ನು ಹಾಕಿಕೊಂಡು ಬಾ. ಹಳೆಯದನ್ನೆಲ್ಲ ಕಳಚಿ ತೆಗೆದುಬಿಡು" ಒಂದು ಚೀಲವನ್ನು ಕೈಗಿತ್ತಳು.

ಸಂಧ್ಯಾ ಅವಳ ಮಾತಿನಂತೆ , ಎಲ್ಲವನ್ನೂ ಬದಲಾಯಿಸಿಬಂದಳು. ಅದನ್ನೆಲ್ಲ ಒಂದು ಚೀಲದಲ್ಲಿ ತುಂಬಿಸಿದಳು. ಅಷ್ಟರಲ್ಲಿ ಅಣ್ಣ ಒಬ್ಬ ಫೋಟೋಗ್ರಾಫರನ್ನು ಕರೆತಂದಿದ್ದ. ದೇವರ ಮುಂದೆ ನಿಂತಿದ್ದ ಸಂಧ್ಯ ದಿನೇಶರ ಫೋಟೋ ಹಾಗೂ ನಾಲ್ಕು ಜನವೂ ಕುಳಿತಿರುವ ಒಂದೆರಡು ಫೋಟೋಗಳನ್ನು ತೆಗೆಸಿದರು. ಗೀತಳ ಇಚ್ಛೆಯಂತೆ ಸಂಧ್ಯಾ ಮೇಷ್ಟ್ರಿಗೆ ನಮಸ್ಕರಿಸಿ ಆಶೀರ್ವಾದ ಪಡೆದಳು. ನಂತರ ಇಬ್ಬರೂ ಅತ್ತಿಗೆಗೆ ನಮಸ್ಕರಿಸಿದರು. ಅಣ್ಣ ಹೊರಕ್ಕೆ ಹೋದಮೇಲೆ, ಗೀತ ದೇವರ ಮುಂದೆ ಲೋಟದಲ್ಲಿಟ್ಟಿದ್ದ ಹಾಲನ್ನು ಸಕ್ಕರೆ ಹಾಕಿ ಇಬ್ಬರಿಗೂ ಕೊಟ್ಟಳು. "ಇಬ್ಬರೂ ರೂಮಿನಲ್ಲಿ ಮಾತನಾಡುತ್ತಿರಿ. ನಾನು ಊಟಕ್ಕೆ ತಯಾರಿ ಮಾಡ್ತೀನಿ" ಇಬ್ಬರನ್ನು ಕಳುಹಿಸಿದಳು.

ರೂಮಿನಲ್ಲಿ ಅನುಮಾನಿಸುತ್ತಾ ನಿಂತವಳಿಗೆ ಹೇಳಿದ. "ಅಷ್ಟೇ.... ಈಗ ಇನ್ನೇನೂ ಮಾಡುವುದಕ್ಕಾಗುವುದಿಲ್ಲ. ಅಣ್ಣ ಅತ್ತಿಗೆಯರ ಎದುರಿಗೆ ನಮ್ಮ ಮದುವೆ ನಡೆದಿದೆ. ಬದಲಾಯಿಸುಕ್ಕಾಗುಲ್ಲ" ಇಬ್ಬರಿಗೂ ತಮ್ಮ ಮೊದಲ ಮದುವೆಯ ನೆನಪಾಗಿರಬೇಕು. ಇಬ್ಬರೂ ಹಾಲನ್ನು ಕುಡಿದು ಮುಗಿಸಿದರು. ಸಂಧ್ಯಾ ಹಾಸಿಗೆಯ ತುದಿಯಲ್ಲಿ ಕೂತಳು.

"ನಿನ್ನ ಮನಸ್ನಲ್ಲಿ ಏನು ನಡೀತಿದೆ ಅಂತ ನಾನು ಊಹಿಸಬಲ್ಲೆ. ಆದದ್ದಾಗಿ ಹೋಯಿತು. ನನಗೋಸ್ಕರ, ನನ್ನ ಮಗುವಿಗೋಸ್ಕರ ನೀನು ಹಿಂದಿನದನ್ನೆಲ್ಲ ಮರೆತು ಖುಷಿ ಖುಷಿಯಾಗಿರಬೇಕು. ನಿನಗೇನೇ ತೊಂದರೆ ಇದ್ದರೂ, ನನ್ನ ಅತ್ತಿಗೆಗೆ ಹೇಳು. ಅವರು ತುಂಬಾ ಒಳ್ಳೆಯವರು. ಸಹಾಯ ಮಾಡ್ತಾರೆ."

ಅವಳು ಏನೂ ಮಾತಾಡದಿದ್ದಾಗ ಅವನಿಗೆ ಬೇಸರವೆನಿಸಿತು.

"ಹೋಗು ಅತ್ತಿಗೆಗೆ ಸಹಾಯ ಮಾಡು, ಅವರು ಒಬ್ಬರೇ ಎಲ್ಲಾ ಮಾಡುಕ್ಕಾಗಲ್ಲ ಈಗಿನ್ನೂ ಚೇತರಿಸಿಕೊಳ್ಳುತ್ತಿದ್ದಾರೆ." ಇಬ್ಬರೂ ಮತ್ತೆ ಅಡಿಗೆ ಮನೆಗೆ ಬಂದರು.

ಊಟ ಮುಗಿದು ಎಲ್ಲರೂ ಎಲೆ ಅಡಿಕೆ ಹಾಕಿಕೊಂಡು ಸುಧಾರಿಸಿಕೊಳ್ಳುವ ಹೊತ್ತಿಗೆ ಮಕ್ಕಳು ಸ್ಕೂಲಿನಿಂದ ಬಂದರು. ಗೀತ ಬೇಸರಿಸದೇ ಮಕ್ಕಳಿಗೆ ಮತ್ತೆ ಬಡಿಸಿದ್ದನ್ನು ಗಮನಿಸಿದಳು. ಅವಳನ್ನೇ ಕುತೂಹಲದಿಂದ ನೋಡುತ್ತಿದ್ದ ಮಕ್ಕಳಿಗೆ ಅವಳನ್ನು ಪರಿಚಯಿಸಿದಳು.

"ಇವರು, ಸಂಧ್ಯಾ ಆಂಟೀ.... ನಮಸ್ತೆ ಹೇಳಿ ಇಬ್ಬರೂ."

"ನಮಸ್ತೆ ಆಂಟೀ ಎರಡೂ ಸ್ವರ ಒಟ್ಟಿಗೆ ಕೇಳಿಸಿತು. ಮಕ್ಕಳ ಕಡೆ ನೋಡಿ ಕಿರುನಗೆ ಸೂಸಿದಳು. ನಂತರ ಎಲ್ಲರಿಗೂ ಬಿಸಿ ಬಿಸಿ ಕಾಫಿ ಕಾಫಿ ತಂದಿತ್ತಳು. ಅಡಿಗೆ ಮನೆಗೆ ದಿನೇಶನ್ನ ಕರೆದು ಹೇಳಿದಳು."

"ಅವಳಿಗೆ ಇಲ್ಲಿ ಏನೋ ಮುಜುಗರವಾಗ್ತಿದೆ. ನಿನ್ನ ಮನೆಗೇ ಕರೆದುಕೊಂಡು ಹೋಗು. ಅವಳ ಮನಸ್ಸು ಸರಿಯಾಗಿಲ್ಲ ಅಂತ ಅನ್ನಿಸುತ್ತೆ. ಸ್ವಲ್ಪ ಹುಶಾರಾಗಿ ನೋಡಿಕೋ. ಅವಳ ಇಷ್ಟದಂತೆ ವರ್ತಿಸು. ಯಾವುದಕ್ಕೂ ಬಲವಂತ ಮಾಡಬೇಡ" ಅವನ ಕಡೆ ನೋಡದೇ ನುಡಿದಳು. ಅರ್ಥವಾಗದವನಂತೆ ಅವನು ಅವಳನ್ನೇ ನೋಡಿದ.

"ನಡೆದಿರುವ ಅವಿವೇಕಗಳನ್ನು ಸರಿಪಡಿಸಬೇಕಲ್ಲವೆ! ನಿನ್ನ ಮೇಲೆ ನನಗೆ ವಿಶ್ವಾಸವಿದೆ. ಹೋಗಿಬನ್ನಿ, ದೇವರು ನಿಮಗೆ ಒಳ್ಳೆಯದನ್ನು ಮಾಡಲಿ.... " ಅವಳ ಧ್ವನಿ ಗಡುಸಾದುದನ್ನು ಗಮನಿಸಿದ. "ಅತ್ತಿಗೆ," ಎನ್ನುತ್ತಾ ಅವಳನ್ನು ತಬ್ಬಿಕೊಂಡೇ ಬಿಟ್ಟ.

ಅವಳು ಅವನ ಬೆನ್ನು ಮೇಲೆ ಕೈಯಾಡಿಸಿ, ಅವನನ್ನು ಮೈದಡವಿ ಹಿಂದಕ್ಕೆ ತಳ್ಳಿದಳು.

"ಚಿಕ್ಕ ಮಗುವಿನ ತರಹ ಆಡಬೇಡ. .. ಒಂದು ನಾಲ್ಕುದಿನ, ಅಥವಾ ವಾರ ಕಳೀಲಿ. ಆಮೇಲೆ ಅವಳ ಆ ಮನೆಯ ಸಾಮಾನು ಸರಂಜಾಮಿನ ಬಗ್ಗೆ ವ್ಯವಸ್ಥೆ ಮಾಡೋಣ. ನಾನು ಅವಳಿಗೆಸಹಾಯ ಮಾಡ್ತೀನಿ. ಅವಳು ಏನು ಮಾಡಬೇಕು ಅಂತ ಇದಾಳೋ ಅದಷ್ಟನ್ನು ಕೇಳಿ ತಿಳಿದುಕೋ... ಅವಳ ಕಡೆಯವರು ಯಾರಿದಾರೆ ಅಂತ ವಿಚಾರಿಸು."

ಸಂಧ್ಯಳಿಗೆಂದೇ ತಂದಿದ್ದ ಬಟ್ಟೆ ಇತ್ಯಾದಿಗಳನ್ನು ಒಂದು ಕಿಟ್‌ಬ್ಯಾಗ್‌ಗೆ ತುಂಬಿಸಿ. ಅವನ ಕೈಗಿತ್ತಳು. ಮತ್ತೊಮ್ಮೆ ಇಬ್ಬರು ಅಣ್ಣನಿಗೆ ನಮಸ್ಕರಿಸಿದರು. ಅವನು ಅವಳನ್ನು ಕರೆದುಕೊಂಡು ಕಾರನ್ನು ಹತ್ತಿದ. ಗೀತ ರಾತ್ರಿಗೆ ಬೇಕಾಗುವಷ್ಟು ಅಡಿಗೆಯನ್ನು ಡಬ್ಬಿಗಳಲ್ಲಿ ತುಂಬಿ ಕೊಟ್ಟಳು. ಕಾರು ಹೊರಟಿತು.

"ಏನೇ ಇಬ್ಬರೂ ದುರ್ದಾನ ತಗೋಂಡವರ ತರಹ ಹೊರಟೇ ಬಿಟ್ಟರಲ್ಲ. ಮುಖದಲ್ಲಿ ಒಂದು ನಗುವಿಲ್ಲ, ಕಳೆ ಇಲ್ಲ" ಅಣ್ಣ ರೇಗಿಸಿದ,.

"ಪೆದ್ದುಗಳು. ಅವಿವೇಕ ಮಾಡಿಕೊಂಡು ಬಿಟ್ಟಿವೆ. ಹೇಗೆ ಸರಿಮಾಡಿಕೊಳ್ಳಬೇಕು ಅಂತ ತಿಳೀದೇ ಒದ್ದಾಡ್ತಿವೆ." ಅವಳೂ ಮೆತ್ತಗೆ ನಕ್ಕಳು.

"ನೀನಾದರೂ ಒಂದಿಷ್ಟು ತಿಳುವಳಿಕೆ ಹೇಳಬೇಕಾಗಿತ್ತು ಅವಳಿಗೆ'

"ಅವಳೂ ನನಗೆ ಹೊಸಬಳೇ ? ಏನು ತಿಳುವಳಿಕೆ ಹೇಳಲಿ ? ನಿಮಗೆ ಗೊತ್ತಿಲ್ಲ ಅವನು ಎಷ್ಟು ಘಾಸಿಗೊಂಡಿದಾನೆ ಅಂತ.

"ನಿನ್ನ ಬಳಿ ಎಲ್ಲವನ್ನೂ ಹೇಳ್ತಾನೆ. ನನಗೇಕೆ ಹೇಳುಲ್ಲ?" ಆಕ್ಷೇಪಿಸಿದ.

"ನಿಮಗೆ ಬಿಡುವಿದ್ದರೆ ತಾನೇ ? ಎಲ್ಲವನ್ನೂ ಕೇಳಿಸಿಕೊಳ್ಳೋಕೆ"

"ಇವತ್ತು ಕಾಲೇಜಿಗೆ ರಜ ಹಾಕಿದೀನಿ. ಬಿಡುವೇ. ಹೇಳುವುದಾದರೆ ಹೇಳು ಕೇಳ್ತೀನಿ"

"ಹಾಗಾದರೆ ನಡೀರಿ ಒಳಕ್ಕೆ" ಇಬ್ಬರೂ ಒಳಗೆ ಬಂದರು. ಮಕ್ಕಳು ತಮ್ಮ ರೂಮಿನಲ್ಲಿ ಆಟವಾಡುತ್ತಿದ್ದುದನ್ನು ಗಮನಿಸಿ, ಗೀತ ಪ್ರಾರಂಭಿಸಿದಳು. ಸಂಧ್ಯಾಳ ಪರಿಚಯವಾದ ಬಗೆ, ಸ್ನೇಹದಿಂದ ನಡೆದ ಮಾತುಕತೆಗಳು ನಂತರ ಒಂದಾದದ್ದು ಪ್ರೀತಿಸಿದ್ದು , ಅದನ್ನ ಮರೆಯಲು ಬಾಂಬೆಗೆ ಹೋದದ್ದು , ಅಲ್ಲಿ ಅವನು ಅಲಕಳನ್ನು ಕಂಡದ್ದು ಎಲ್ಲವನ್ನೂ ವಿವರವಾಗಿ ತಿಳಿಸಿದಳು.

ಅಣ್ಣ ನಿಜಕ್ಕೂ ಚಕಿತನಾದ. ಇಷ್ಟೆಲ್ಲಾ ನಡೆದಿದೆ. ನನಗೆ ಒಂದು ಚೂರೂ ತಿಳಿದಿಲ್ಲ.ಎಸ್ಟೇಟಿನ ಮನೆಯಲ್ಲಿ ಅವನನ್ನು ಒಬ್ಬನನ್ನೇ ಇರಲು ಬಿಡಬಾರದಾಗಿತ್ತು. ಅಥವಾ

ಆಗಲೇ ಬಲವಂತವಾಗಿ ಮದುವೆ ಮಾಡಿಕಳಿಸಬೇಕಾಗಿತ್ತು... ಎಂತಹ ಅವಮಾನ ! ಅವನು ನನ್ನ ತಮ್ಮ.... ಅವಳು ನನ್ನ ಸ್ಟೂಡೆಂಟ್...ಹೀಗೆ ವರ್ತಿಸುವುದದಕ್ಕೆ ಹೀನಾಯಮಾನವಾಗಲಿಲ್ಲವೇ ? ಕೂಗಾಡಿದ.

"ನೀವು ಹೀಗಾಡುತ್ತೀರಿ ಅಂತಲೇ ಇದನ್ನೆಲ್ಲ ತಿಳಿಸಿರಲಿಲ್ಲ. ಅವನಿಗೆ ನನ್ನ ಮೇಲೆ ಅತೀ ವಿಶ್ವಾಸ. ಅದಕ್ಕೆ ಎಲ್ಲಾ ಹೇಳಿದಾನೆ. ಇನ್ನಾದರೂ ಎಲ್ಲಾ ಸರಿಹೋಗಲಿ ಅಂತ ಹಾರೈಸೋಣ ಅಷ್ಟೇ...."

ಅಣ್ಣ, ದುಡುಡದಿಂದ ಮುಖ ಊದಿಸಿಕೊಂಡಿದ್ದನ್ನು ಅವಳು ಗಮನಿಸಿ ನಗುತ್ತಾ ಅವನ ಬಳಿ ಸಾರಿದಳು.

"ನಮ್ಮ ದಿನೇಶನ ಮಗುವಿನ ಜತೆ ಜತೆಯಾಗಿ ಆಡಲು, ಬೆಳೆಯಲು ನಮಗಿನ್ನೊಂದು ಮಗು ಬೇಡವೇ ?" ಅವನಿಗೆ ಅವಳ ಮಾತಿನ ಇಂಗಿತ ತಿಳಿಯಿತು.

"ಅವನಷ್ಟು ಅವಿವೇಕಿ ನಾನಲ್ಲ. ಅದರಿಂದಲೇ, ನನಗಿನ್ನೂ ಒಬ್ಬಳೇ ಹೆಂಡತಿ" ಎನ್ನುತ್ತಾ ಅವಳೆಡೆಗೆ ಬಾಗಿದ.

ದಾರಿಯಲ್ಲಿ ಒಂದು ಕಡೆ ಕಾರನ್ನು ನಿಲ್ಲಿಸಿ, ಒಂದಿಷ್ಟು ಸ್ವೀಟ್ಸ್ ಪ್ಯಾಕೆಟ್‌ಗಳನ್ನು ಕೊಂಡ. "ಸಂಧ್ಯಾ ನಿನಗೇನಾದರೂ ಬೇಕಾ ?" ಕೇಳಿದ. ಅವಳು ಬೇಡ ಎನ್ನುವಂತೆ ತಲೆ ಆಡಿಸಿದಳು.

ಎಸ್ಟೇಟಿನ ಒಳಗೆ ಕಾರು ಬಂದು ನಿಂತಿತು. ಅವನೊಡನೆ ಇಳಿದ ಅವಳನ್ನೇ ಕೆಲಸಗಾರರೆಲ್ಲರೂ ಚಕಿತರಾಗಿ ನೋಡಿದರು. ಅವರಲ್ಲಿ ಕೆಲವರು, ಅವಳು ಆಗಾಗ್ಗೆ ಅವನ ಮನೆಗೆ ಬಂದಿದ್ದನ್ನು ಗಮನಿಸಿದ್ದರು. ಅವನ ಬಗ್ಗೆಏನು ಭಾವಿಸಿದ್ದರೋ ಎಂದೂ ಯಾವ ಮಾತೂ ಕೇಳಿ ಬಂದಿರಲಿಲ್ಲ. ಅವನ ಕಡೆ ನೋಡುತ್ತಿದ್ದವರನ್ನು ಹತ್ತಿರಕ್ಕೆ ಕರೆದ "ಇನ್ನು ಮೇಲೆ ಇವರು ನಿಮ್ಮ ಯಜಮಾನಿತಿ... ನನ್ನಂತೆಯೇ ಈ ಎಸ್ಟೇಟಿನ ಮಾಲೀಕರು... ತಗೊಳ್ಳಿ ಎಲ್ಲರೂ ಸಿಹಿಯನ್ನು ಹಂಚಿಕೊಂಡು ತಿನ್ನಿ" ಒಬ್ಬ ಮುಂದೆ ಬಂದು ಪ್ಯಾಕೆಟ್ ತುಂಬಿದ್ದ ಚೀಲವನ್ನು ಕೈಗೆತ್ತಿಕೊಂಡ.

ಕೆಲವರು "ನಮಸ್ಕಾರ ಅಮ್ಮಾವರೇ" ಎಂದರು... ಸಂಧ್ಯಾ ಮುಗುಳ್ನಕ್ಕು ನಮಸ್ಕಾರ ಎಂದು ಕೈ ಮುಗಿದಳು. ಒಳಗೆ ಹೋಗುವ ಮುನ್ನ ಸಂಧ್ಯಾ ಮತ್ತೊಮ್ಮೆ ಹಿಂತಿರುಗಿ ನೋಡಿದಳು.ಎಲ್ಲರೂ ಗುಸು,ಗುಸು ಎಂದು ತನ್ನ ಬಗ್ಗೆ ಆಡಿಕೊಳ್ಳುತ್ತಿದ್ದಾರೆಂದು ಅನ್ನಿಸಿ ಅವಮಾನವಾದಂತಾಯಿತು. ಇದ್ದಕ್ಕಿದ್ದಂತೆ ಅವಳ ಮುಖದ ಚಹರೆ ಬದಲಾಯಿಸಿದ್ದನ್ನು ಅವನು ಗಮನಿಸಿದ. 'ಏನಾಯ್ತು' ಎಂದು ಕೇಳುವ ಮೊದಲೇ ಅವಳು ಮನೆಯ ಬಾಗಿಲನ್ನು ದಢಾರನೆ ಹಾಕಿ, ಮುಚ್ಚಿದ್ದನ್ನು ಗಮನಿಸಿ ಕೇಳಿದ.

"ಅವರಿಗೆಲ್ಲ ಎಷ್ಟು ಸಂತೋಷವಾಗಿರುತ್ತೆ ಗೊತ್ತಾ? ಯಾಕೆ ಯಜಮಾನ್ರೇ ಇನ್ನೂ ಲಗ್ನಾನೇ ಆಗಿಲ್ಲ ಅಂತ ಕೇಳುತ್ತಿದ್ದರು. ಅವರಿಗೆಲ್ಲ ಒಂದು ಭಾರಿ ಊಟ ಹಾಕಿಸಬೇಕು"

ಅವಳು ಸ್ವಲ್ಪ ಸಮಾಧನಾಗೊಂಡಂತೆ ಕಂಡರೂ, ಏನೋ ಗೊಂದಲಕ್ಕೊಳಗಾಗಿದಾಳೆ ಎಂದು ಅವಳ ಮುಖ ಹೇಳುತ್ತಿತ್ತು. ಅವಳ ಎದುರು ನಿಂತು ಅವಳನ್ನೇ ನೋಡಿ ನುಡಿದ.

"ಸಂಧ್ಯಾ ನೀನು ಹೆದರಬೇಡ. ನಿನಗೆ ಹೇಗೆ ಬೇಕೋ ಹಾಗೇ ಇರಬಹುದು ಇಲ್ಲಿ. ಇದು ಇಂದಿನಿಂದ ನಿನ್ನ ಮನೆ ಸಹ. ಯಾವ ಸಂಕೋಚವೂ ಬೇಡ. ಯಾವ ಹೆದರಿಕೆಯೂ ಬೇಡ. ನಿನ್ನನ್ನು ಸುಖವಾಗಿಟ್ಟುಕ್ಕೊಳ್ಳುವುದಾಗಿ ಮಾತುಕೊಟ್ಟಿದೀನಿ ಅತ್ತಿಗೆಗೆ " ಎಂದು ಹೇಳಿ ತನ್ನ ರೂಮಿಗೆ ಹೋಗಿ, ಬಟ್ಟೆ ಬದಲಾಯಿಸಿ ಮಂಚದ ಮೇಲೆ ಉರುಳಿಕೊಂಡ.

ಅವಳಿಗೂ ಸುಸ್ತಾಗಿತ್ತು. ಅವನ ಹಿಂದೆ ರೂಮಿಗೆ ಹೋಗುವ ಧೈರ್ಯವಾಗಲಿಲ್ಲ. ಅಲ್ಲೇ ಸೋಫಾದ ಮೇಲೆ ಹಾಗೇ ಉರುಳಿಕೊಂಡಳು. ಅವಳಿಗೆ ಚೆನ್ನಾಗಿ ನಿದ್ದೆ ಬಂದಿತ್ತು. ನಿದ್ದೆ ಬಾರದೇ ಹಾಗೇ ಮಲಗಿದ್ದವನಿಗೆ, ಕಿಟಕಿಯಾಚೆ ಯಾರೋ ತಮ್ಮನ್ನೇ ಗಮನಿಸುತ್ತಿದ್ದಾರೆಂದು ಅನ್ನಿಸಿದಾಗ ಅವನುಎದ್ದು ಕೂತ. ದಢಾರನೆ ಕಿಟಕಿಯನ್ನು ಹಾಕುವ ಮನಸ್ಸಾದರೂ , ತಡೆದುಕೊಂಡು ಹೊರಗೆ ಬಂದು ನೋಡಿದ. ಅವಳು ಸುಖ ನಿದ್ರೆಯಲ್ಲಿದ್ದಳು. ಅವಳನ್ನು ಎಬ್ಬಿಸುವ ಮನಸ್ಸಾಗಲಿಲ್ಲ. ಅಲ್ಲಿಯೇ ಅವಳ ಎದುರಿಗಿದ್ದ ಸೋಫಾದ ಮೇಲೆ ಕುಳಿತು, ತಲೆಯ ಹಿಂದೆ ಕೈಗಳನ್ನು ಸೇರಿಸಿ, ಕಣ್ಣು ಮುಚ್ಚಿದ.

ಚೆನ್ನಾಗಿ ಕತ್ತಲಾದರೂ ಅವಳು ಏಳದಿದ್ದಾಗ ಅವಳ ಮೈ ಮುಟ್ಟಿ ಎಬ್ಬಿಸಿದ. "ಏಳು ಚೆನ್ನಾಗಿ ಕತ್ತಲಾಗಿದೆ. ಮತ್ತೆ ರಾತ್ರಿ ನಿದ್ದೆ ಮಾಡಬೇಡವೇ ?" ಎಂದ.

ಅವಳು ಬೆಚ್ಚಿ ಎದ್ದು ಕೂತಳು. "ಅತ್ತಿಗೆ ಕೊಟ್ಟ ಅಡಿಗೆ ಇದೆ. ಫ್ಲಾಸ್ಕ್‌ನಲ್ಲಿ ಕಾಫಿ ಇದೆ. ತಂದುಕೊಡ್ತೀನಿ" ಎದ್ದು ದೀಪ ಹಾಕಿ, ಎರಡು ಕಪ್‌ಗಳಲ್ಲಿ ಕಾಫಿಯನ್ನು ತುಂಬಿಸಿ ಅವಳ ಕೈಗೆ ಒಂದನ್ನು ಕೊಟ್ಟು , ತಾನು ಒಂದನ್ನು ಹಿಡಿದು ಕುಳಿತ. ಅವಳು ಕುಡಿದು ಮುಗಿಸಿದ ಮೇಲೆ ಹೇಳಿದ.

"ಇಲ್ಲಿಯ ಕೆಲಸಗಾರರು ಹೊಸಬರು,ಅವರುಗಳು ಏನೋ ಕುತೂಹಲದಿಂದ ನೋಡ್ತಾರೆ. ಹೀಗೆ ಹೊರಗೆ ಮಲಗಬೇಡ. ಒಳಗೆ ರೂಮಿನಲ್ಲೇ ಮಲಗು. "

ಅವಳು ಅವನನ್ನೇ ವಿಚಿತ್ರವಾಗಿ ನೋಡಿದಳು.

"ನಿನ್ನ ಮನಸ್ಸಲ್ಲಿ ಏನಿದೆ ಅಂತ ನನಗೆ ಅರ್ಥವಾಗುತ್ತೆ. ನಿನ್ನ ಇಚ್ಛೆ ಇಲ್ಲದೆ ನಾನೆಂದೂ ನಿನ್ನ ಮೈಯನ್ನು ಮುಟ್ಟುವುದಿಲ್ಲ, ಆದರೆ ಅವರುಗಳಿಗೆ ಏನು ಅನುಮಾನ ಬರಬಾರದು. ನಾವು ಕುತೂಹಲದ ವಸ್ತುಗಳಾಗಬಾರದು."

ಆ ರಾತ್ರಿ ಅವನು ನುಡಿದಂತೆ, ಅವಳ ಮಗ್ಗುಲಲ್ಲೇ ಮಲಗಿದ್ದರೂ ಅವಳ ಕಡೆ ತಿರುಗಿ ನೋಡಿರಲಿಲ್ಲ. ರಾತ್ರಿಯೆಲ್ಲ ನಿದ್ದೆಯಿಲ್ಲದೆ ಹೊರಳಾಡಿದ್ದಳು. ಅವನು ಮತ್ರ ಗಾಢವಾದ ನಿದ್ದೆಯಲ್ಲಿದ್ದ. ಬೂಟಾಟಿಕೆಯೋ ಎಂಬ ಅನುಮಾನ ಸಹ ಅವಳಿಗೆ ಮಾಡಿತು.

ಕೆಲವೇ ತಿಂಗಳ ಹಿಂದೆ, ತಾನು ಅವನ ಸ್ನೇಹವನ್ನು ಬಯಸಿ, ಅವನನ್ನು ಮೆಚ್ಚಿ ಅವನ ಸಂಗವನ್ನು ಸಹ ಆಶಿಸಿ ಪೂರೈಸಿಕೊಂಡಿದ್ದ. ಆದರೆ ಇಂದು ಏನಾಗಿದೆ ತನಗೆ ? ತನ್ನನ್ನು

ಅರಿತವನ, ತನ್ನ ಬಗ್ಗೆ ಆಸಕ್ತಿ ಇರುವವನ ಪಕ್ಕದಲ್ಲಿ ಮಲಗಿಯೂ ಅವನನ್ನು ಬಯಸಲಾರೆ. ಅವನವಳಾಗಲಾರೆ. ಆ ಆಸೆಯೇ ಮೂಡುತ್ತಿಲ್ಲ. ಏಕೆ ? ಏಕೆ ? ತನ್ನಬಗ್ಗೆ ಏನನ್ನಿಸಬಹುದು ಅವನಿಗೆ ! ನಿರಾಸೆಯಾಗಿರಬಹುದೆ ? ತನ್ನನ್ನೆಂದೂ ಬಲವಂತ ಪಡಿಸವುದಿಲ್ಲವೆಂದು ಹೇಳಿದ್ದಾನೆ. ಆದರೆ ಅವನನ್ನು ನಂಬುವುದು ಹೇಗೆ ? ಆಗಲಿ ಒಂದೆರಡು ದಿನಗಳು ಕಳೆಯಲಿ. ಅವನು ಅವನ ಮಾತಿನಂತೆ, ನಡೆದುಕೊಂಡರೆ, ನಾನೇ ಅವನಿಗೆ ಸೋಲುತ್ತೇನೆ. ಕೃತಜ್ಞತೆಯನ್ನಾದರೂ ಸಲ್ಲಿಸಬೇಡವೇ ! ಎಂದುಕೊಂಡಾಗ ಅವಳಿಗೆ ಅಳು ಬಂದಂತಾಗಿತ್ತು. ತನ್ನಸ್ವಂತ ಗಂಡ ತನ್ನೊಂದಿಗೆ ನಡೆದುಕೊಂಡ ರೀತಿ ಅವಳನ್ನು ಘಾಸಿ ಗೊಳಿಸಿತ್ತು. ಹತ್ತು ವರ್ಷಗಳ ನಂತರ ತಾನು ಗರ್ಭಿಣಿ ಎಂದು ತಿಳಿದರೆ ತನ್ನ ಗಂಡ ಸಂತೋಷ ಪಡುತ್ತಾನೆಂದು ತಿಳಿದಿದ್ದಳು. ಆದರೆ ಅವಳಿನ್ನು ಆ ವಿಷಯವನ್ನು ಅವನಿಗೆ ತಿಳಿಸಿರಲೇ ಇಲ್ಲ. ಅವನಿಗೆ ಹೇಗೆ ಗೊತ್ತಾಯ್ತು ! ತನ್ನ ಚಲನವಲನದ ಮೇಲೆ ಗಮನವಿಟ್ಟಿದ್ದನೆ? ಅಥವಾ ತನ್ನ ತಿಂಗಳಿನ ಕ್ರಮದಲ್ಲಾದ ಬದಲಾವಣೆಯಿಂದ ಅನುಮಾನ ಮೂಡಿರಬಹುದೇ ? ಅಥವಾ ಅಕ್ಕ ಪಕ್ಕದವರು ಯಾರಾದರೂ ತಿಳಿಸಿರಬಹುದೇ ? ಅಥವಾ ನನ್ನ ಮೇಲಿನ ಪ್ರೀತಿ ಕಡಿಮೆಯಾಗಿ, ನನ್ನಿಂದ ದೂರ ಹೋಗುವ ಯೋಚನೆ ಈ ಮೊದಲೇ ಇತ್ತೋ ಏನೋ ! ಅದಕ್ಕೆಇದು ಒಂದು ನೆಪವಾಗಿರಬಹುದು. ಹೇಗೂ ಟೂರ್ ಟೂರ್ ಎಂದು ತಿಂಗಳನಲ್ಲಿ ಹೊರಗೇ ಇರುತ್ತಿದ್ದ ದಿನಗಳೇ ಹೆಚ್ಚು. ಅಲ್ಲಿ ನನಗೆ ತಿಳಿಯದಂತೆ ಯಾರಾದರೂ ಗೆಳತಿ ಇದ್ದಾಳೇನೋ... ಆದ್ದರಿಂದಲೇ ಇರಬೇಕು" ಯಾವ ಜಗಳ ಕದನವಿಲ್ಲದೆ ನನ್ನನ್ನು ಹೀಯಾಳಿಸದೇ ತನ್ನ ಪಾಡಿಗೆ ತಾನು ದೂರ ಹೋಗಿದ್ದಾರೆ.

"ಹೌದು.. ಹೌದು. ಅದೇ ...ಇರಬಹುದು. ತನಗೇಕೆ ಈ ವಿಷಯ ಹೊಳೆದಿರಲಿಲ್ಲ? ಅವನೂ ನನಗೆ ಮೋಸ ಮಾಡಿದ್ದರೆ, ಅವನದೂ ತಪ್ಪಿದ್ದರೆ,... ಇದಕ್ಕೆಲ್ಲ ಅವನೇ ಕಾರಣನಾಗುತ್ತಾನೆ. ..ಆದರೆ ಅವನೊಡನೆ ತಾನು ಹತ್ತು ವರ್ಷಗಳು ಕಳೆದರೂ ತನಗೇಕೆ ಮಕ್ಕಳಾಗಿರಲಿಲ್ಲ ? ಆಗದಂತೆ ಅವನೇ ಎಚ್ಚರಿಕೆ ವಹಿಸಿರಬೇಕು. ಈ ವಿಷಯ ತನಗೇಕೆ ತಿಳಿಯಲಿಲ್ಲ ? ಬೇರೊಬ್ಬ ಸಂಗಾತಿ ಇದ್ದು ಅವಳಿಗೆ ಮಕ್ಕಳಾಗಿದೆಯೋ ಇಲ್ಲವೋ ತಿಳಿದುಕೊಳ್ಳಬೇಕಲ್ಲ. ಇದ್ದಕ್ಕಿದ್ದಂತೆ ಆ ಕುತೂಹಲ ಹೆಚ್ಚಾದಾಗ, ಚಡಪಡಿಕೆಯನ್ನು ತಡೆಯಲಾರದೆ ಎದ್ದು ಕೂತಳು.

ಬೆಳಗಿನ ಜಾವದ ತಂಗಾಳಿ ಬೀಸಿದಾಗ ಅವನಿಗೆ ಎಚ್ಚರವಾಯಿತು. ಪಕ್ಕದಲ್ಲಿ ಅವಳು ಮಲಗಿಲ್ಲದ್ದನ್ನು ಕಂಡು ಗಾಬರಿಯಿಂದ ಎದ್ದು ಆಚೆಗೆ ಬಂದ. ಅಲ್ಲೂ ಕಾಣಲಿಲ್ಲ. ಬಚ್ಚಲು ಮನೆಗೆ ಬಂದ. ಒಳಗಿನಿಂದಬಾಗಿಲು ಹಾಕಿದ್ದುದನ್ನು ಕಂಡ. ಇಷ್ಟು ಮುಂಚೆ ಅವಳೇಕೆ ಎದ್ದಳೋ ಎಂದುಕೊಂಡು ಮತ್ತೆ ಬಂದು ಮಲಗಿದ.

ಸ್ವಲ್ಪ ಹೊತ್ತಿನಲ್ಲಿ ಘಮಘಮಿಸುವ ಬಿಸಿ ಬಿಸಿ ಕಾಫಿಯನ್ನು ಕಪ್‌ಗಳಿಗೆ ಹಾಕಿಕೊಂಡು ಸಂಧ್ಯಾ ಅವನ ರೂಮಿಗೆ ಬಂದಳು. ಮತ್ತೆ ಮತ್ತೆ ಕಣ್ಣುಜ್ಜಿಕೊಂಡು ಅವಳನ್ನೇ ನೋಡಿದ.

ಸ್ನಾನಮಾಡಿ, ಬೇರೆ ಸೀರೆಯನ್ನು ಉಟ್ಟು ನಗುಮುಖದೊಡನೆ ನಿಂತಿರುವ ಈ ಸಂಧ್ಯಾ ಅವಳೇನಾ ಎನ್ನುವ ಅನುಮಾನ ಬಂತು. ನಿಧಾನವಾಗಿ ಎದ್ದು ಕೂತ...ಅವಳು ಅವನ ಮುಂದೆ ಕಾಫಿ ಕಫ್ ಹಿಡಿದಳು.

"ನೀನೇಕೆ ಇಷ್ಟುಮುಂಚೆ ಎದ್ದು ಕಾಫಿ ಮಾಡಿದೆ? ನಾನೇ ಮಾಡ್ತಿದ್ದೆ."

"ಇನ್ನು ಮೇಲೆ ಈ ಕೆಲಸ ನಾನು ಮಾಡಿದರೆ ಸೊಗಸಲ್ಲವೇ?"

"ಅದೇನೋ ಹೌದು ಆದರೆ ನಿನಗೆ ಎಲ್ಲಾ ಹೊಸದು ಅದಕ್ಕೇ...."

"ಹೊಸದೇನಲ್ಲ. ಈ ಮುಂಚೆ ಎಷ್ಟುಸಾರಿ ಬಂದಿದೀನಿ. ಎಲ್ಲಾ ತಿಳಿದಿದೆ."

ಒಂದು ರಾತ್ರಿಯಲ್ಲಿ ಏನಿಷ್ಟು ಬದಲಾವಣೆ ಎಂದುಕೊಂಡರೂ ಕೇಳಲಿಲ್ಲ.

"ನಾನೂ ಎದ್ದು ಸ್ನಾನ ಮಾಡಿ, ರೆಡಿಯಾಗಲಾ ? ಎಲ್ಲಿಗಾದರೂ ಹೋಗಿ ಬರೋಣವಾ ?" ಆಸೆಯ ಕಣ್ಣುಗಳಿಂದ ಅವಳನ್ನೇ ನೋಡಿದ.

"ನಿಮಗಿಷ್ಟವಿದ್ದರೆ ಹೋಗೋಣ... ನನಗೇನೂ ಆಸೆ ಇಲ್ಲ."

"ಹಾಗಾದರೆ ಇಷ್ಟು ಮುಂಚೆ ಎದ್ದು ಏನು ಮಾಡುವುದು ? ತೋಟದ ಕೆಲಸದ ಆಳುಗಳು ಬರುವುದು ಇನ್ನೂ ತಡ. ಅಲ್ಲಿಯವರೆಗೆ ಮಲಗ್ತೀನಿ. ನೀನೂ ಮಲಗು. ಪಕ್ಕಕ್ಕೆಸರಿದು ಜಾಗ ಮಾಡಿಕೊಟ್ಟ. ಅವಳು ನಿಂತಲ್ಲಿಂದ ಅಲುಗಾಡಲಿಲ್ಲ. ತನ್ನ ಮಾತಿನಂತೆ ಅವಳು ಮಲಗಿದ್ದರೆ, ಬರಸೆಳೆದುಕೊಳ್ಳಬಹುದಾಗಿತ್ತು ಎಂದು ಅವನುಯೋಚಿಸುತ್ತಿದ್ದ. ತನ್ನ ಕೈ ಹಿಡಿದೆಳೆದು ತನ್ನ ಮೇಲೆ ನನ್ನನ್ನು ಒರಗಿಸಿಕೊಂಡಿದ್ದರೆ , ಎಲ್ಲಾವನ್ನು ಮರೆತು ಅವನವಳಾಗಲು ಪ್ರಯತ್ನಿಸುತ್ತಿದ್ದೆ ಎಂದು ಅವಳು ಚಿಂತಿಸುತ್ತಿದ್ದಳು. ಆದರೆ, ಆಕ್ಷಣ ಬರಲೇ ಇಲ್ಲ. ಅವಳನ್ನೇ ನೋಡಲು ಮುಜುಗುರವೆನಿಸಿ ಅವನು ಕಣ್ಣು ರೆಪ್ಪೆ ಮುಚ್ಚಿದ. ಅವಳು ಕಿಟಕಿಯ ಬಳಿ ನಿಂತು ಕಿಟಕಿಯಿಂದಾಚೆ ಕಂಡು ಬುರವ ದೃಶ್ಯಗಳನ್ನು ನೋಡತೊಡಗಿದಳು.

ಕ್ಷಣಗಳು ಸರಿದು ಹೋದವು. ಬಿಸಿಲು ಏರಿದಂತೆನಿಸಿ, ಮಲಗಿರಲು ಬೇಸರವಾದಾಗ ಅವನು ಎದ್ದ. ರೂಮಿನಲ್ಲಿ ಅವಳು ಇರಲಿಲ್ಲ. ಹೊರಗೆಬಂದ.ಅಡಿಗೆ ಮನೆಯಲ್ಲಿ ಸದ್ದು ಕೇಳಿ ಅಲ್ಲಿಗೆ ಬಂದ. ಅವಳು ತರಕಾರಿಯನ್ನು ಹೆಚ್ಚುತ್ತಿದ್ದುದನ್ನು ಗಮನಿಸಿ ಬಚ್ಚಲು ಮನೆ ಕಡೆ ನಡೆದ.

ಸ್ನಾನ ಮುಗಿಸಿ ಬರುವಷ್ಟರಲ್ಲಿ ಅವಳು ತರಕಾರಿ ಹಾಕಿ ಮಾಡಿದ ಉಪ್ಪಿಟ್ಟನ್ನು ತಂದಿತ್ತಳು.ಒಂದು ಚಮಚದಷ್ಟನ್ನು ಬಾಯಿಗೆ ಹಾಕಿಕೊಂಡ. ರುಚಿಯಾಗಿತ್ತು.

"ನಿಜ ಹೇಳ್ತೀನಿ ಸಂಧ್ಯಾ. ನನ್ನಕೈನ ಅಡಿಗೆ ತಿಂಡಿಗಿಂತ ತುಂಬಾ ರುಚಿಯಾಗಿದೆ. ಅತ್ತಿಗೆ ಮಾಡುವಷ್ಟೇ ಚೆನ್ನಾಗಿ ಮಾಡಿದೀಯ" ಅವನ ನೇರವಾದ ಹೊಗಳಿಕೆಯ ಮಾತು ಅವಳಿಗೆ ಹಿಡಿಸಿತು.

''ಥ್ಯಾಂಕ್ಸ್''ಎಂದಳು.

''ನಮ್ಮ ನಮ್ಮಲ್ಲಿ ಇಂತಹ ಫಾರ್ಮಾಲಿಟಿ ಬೇಕಾ ? ಮುಂಚಿನಂತೆ ನಾವು ಬರೀ ಸ್ನೇಹಿತರಲ್ಲ'' ಅವಳೇನನ್ನುವಳೋ ಎಂಬಂತೆ ಅವಳನ್ನೇ ನೋಡಿದ. ಅವಳು ಏನನ್ನೋ ಹೇಳಲು ತವಕಿಸುತ್ತಿರುವಂತೆ ಅನ್ನಿಸಿತು. ಅವಳಾಗಿಯೇ ಹೇಳಲಿ ಎಂದು ಕಾದ.ಅವಳೂ ಹೇಳಲಿಲ್ಲ ಇವನೂ ಕೇಳಲಿಲ್ಲ.

ಅಂದಿನಿಂದ ಅವರಿಬ್ಬರ ದಿನಚರಿ ಬೇರೆ ತರಹ ಶುರುವಾಯಿತು. ದಿನೇಶ ಅವಳು ಸಂತೋಷವಾಗಿರುವಂತೆ ನೋಡಿಕೊಳ್ಳುತ್ತಿದ್ದ. ಸಂಧ್ಯಾ ಅವನಿಗೆ ನೋವಾಗದಂತೆ ಎಚ್ಚರ ವಹಿಸುತ್ತಿದ್ದಳು. ತನ್ನ ಮಾತಿನಿಂದ, ವರ್ತನೆಯಿಂದ ಅವನು ನೋಯುವಂತಾಗಬಾರದೆಂದು ಚಿಂತಿಸುತ್ತಿದ್ದಳು. ಅಷ್ಟಾದರೂ ರಾತ್ರಿಯ ಹೊತ್ತು ಇಬ್ಬರೂ ದೂರ ದೂರ.ಅವನು ಅವಳನ್ನು ಬಲವಂತಪಡಿಸಲು ಇಚ್ಛಿಸುತ್ತಿರಲಿಲ್ಲ.ಇವಳು ತಾನಾಗಿಯೇ ಅವನ ಬಳಿ ಹೋಗಲು ಹಿಂಜರಿದಳು.

ಮಧ್ಯೆಒಂದೆರಡು ಸಲ ಅಣ್ಣನ ಮನೆಗೆ ಕರೆದುಕೊಂಡು ಹೋಗಿದ್ದ. ಗೀತ ವಿಶ್ವಾಸದಿಂದ ಇಬ್ಬರನ್ನೂ ಮಾತನಾಡಿಸಿ, ರುಚಿಯಾದ ತಿಂಡಿ ಮಾಡಿ ಬಡಿಸಿದ್ದಳು. ನೀವಿಬ್ಬರೂ ಸಂತೋಷವಾಗಿದೀರಿ ತಾನೆ ? ಅಕ್ಕರೆಯಿಂದ ಕೇಳಿದಳು.

ಹೂ ಎಂದಷ್ಟೇ ಹೇಳಿದ ದಿನೇಶ ಸಂಧ್ಯಾಳ ಕಡೆ ನೋಡಿದ. ಅವಳು ತಲೆ ತಗ್ಗಿಸಿದ್ದಳು.

ಹಿಂತಿರುಗಿದ ನಂತರ ಸಂಧ್ಯಾ ಕೇಳಿದ್ದಳು.

ನಿಮ್ಮ ಅತ್ತಿಗೆ ಹತ್ತಿರ ಮುಚ್ಚುಮರೆ ಇಲ್ಲದೇ ಎಲ್ಲವನ್ನೂ ಹೇಳ್ತೀರಿ ಅಂತ ಅಂದಿದ್ರಿ. ಆದರೆ ಸುಖವಾಗಿಲ್ಲ. ಸಂತೋಷವಾಗಿಲ್ಲ ಅಂತ ಯಾಕೆ ಹೇಳಲಿಲ್ಲ ?

''ಏಕೆ ಏನಾಗಿದೆ ? ನಾನು ಸಂತೋಷವಾಗಿದೀನಲ್ಲ. ನಿನಗೆ ತೊಂದರೆ ಇದ್ದಿದ್ದರೆ ನೀನೇ ಹೇಳಿ ಬಿಡಬೇಕಾಗಿತ್ತು.''

''ನಿಜ ಹೇಳಿ, ನನ್ನಿಂದ ತೊಂದರೆಯೇ ತಾನೇ ? ನಿಮಗೆ ನಾನು ಬೇಕೋ ಬೇಡವೋ, ನಾನು ಇಲ್ಲಿ ಬಂದು ಸೇರಿಕೊಂಡಿದೀನಲ್ಲ.''

''ಯಾರೂ ಒಬ್ಬರಿಗೊಬ್ಬರು ತೊಂದರೆ ಕೊಡುವ ಆಸೆಯಿಂದ ಹೀಗೆ ಒಂದಾದುದಲ್ಲ. ನನಗೆ ಏನೂ ತೊಂದರೆ ಇಲ್ಲ. ''

''ಹಾಗೆ ಹೇಳಿದರೆ ನಾನು ನಂಬುಲ್ಲ. ನಾನು ನಿಮ್ಮ ಹೆಂಡತಿ ಅಂತ ಸ್ವೀಕರಿಸಿದ ಮೇಲೆ ಮುಚ್ಚುಮರೆ ಇರಬಾರದು. ನಿಜ ಏನು ಅಂತ ಹೇಳಿ. ''

ನಾನು ನೀನುಗಂಡ ಹೆಂಡತಿ, ಹೊರಗಿನವರ ಕಣ್ಣಿಗೆ ಆದರೆ ನಾವಿಬ್ಬರೂ ದೂರ ದೂರವೇ ಇದೀವಿ ಅಲ್ಲವೇ ? ಇದರಿಂದ ಯಾರಿಗೂ ತೊಂದರೆ ಇಲ್ಲ. ಹೌದು ತಾನೇ?

"ನೀವು ನನ್ನನ್ನು ದೂರ ಇಟ್ಟಿದ್ದೀರಿ... ಪ್ರೀತಿಯಿಂದ ಕರೆದರೆ ನಾನು ಬರುವುದಿಲ್ಲವೇ? ಹೆಂಗಸರ ಮನಸ್ಸನ್ನು ಅರಿಯದವರು , ನೀವೆಂತಹವರು ಎಂದು ಹೇಳುವ ಮನಸ್ಸಾದರೂ ತಡೆದುಕೊಂಡಳು. "

"ಏನೋ ಹೇಳ ಹೊರಟವಳು ನೀನು ಸುಮ್ಮನಾದೆಯಲ್ಲ. ನನ್ನಿಂದ ನೀನೂ ಮುಚ್ಚಿಡುತ್ತಿದ್ದೀಯ ಅಲ್ಲವೆ ? ಅವಳನ್ನೇ ಗಮನಿಸುತ್ತಿದ್ದು ಕೇಳಿದ."

"ಏನಿಲ್ಲ ... ಏನಿಲ್ಲ... " ತಪ್ಪಿಸಿಕೊಳ್ಳಲು ನೋಡಿದಳು. "ಏನೋ ಇದೆ. ನೀನು ಹೇಳಲೇಬೇಕು."ಅವನು ತಮಾಷೆಗೆಂಬಂತೆ ಅವಳ ಭುಜ ಹಿಡಿದು ಬಲವಂತಗೊಳಿಸಿದ. ಅವಳ ತಲೆ ಆಡಿಸುತ್ತಾಅವನ ಎದಗೆ ಒರಗಿದಳು.ಅವನು ಅವಳ ತಲೆಯ ಮೇಲೆ ತನ್ನ ಮುಖವನ್ನಿಟ್ಟು ಕೇಳಿದ.

"ಸಂಧ್ಯಾ ನನ್ನನ್ನೇಕೆ ಇಷ್ಟು ಸತಾಯಿಸುತ್ತೀಯ ?" ಪ್ರೀತಿಯಿಂದ ಅವಳ ಮೈದಡವಿದ. "ನಾನೇನು ಸತಾಯಿಸಲಿಲ್ಲ. ನೀವು ಒಂದೇ ಒಂದು ಪ್ರೀತಿ ಮಾತನ್ನಾಡಿದ್ದರೂ ಸಾಕಾಗಿತ್ತು ನನಗೆ" ಎಂದು ಹೇಳಬೇಕೆಂದುಕೊಂಡಳು. ಮತ್ತೇನನ್ನೋ ಯೋಚಿಸಿದಳು. ಅದು ಬರೀ ಕೃತಕವಾದ ಮಾತಾಗುತ್ತದೆಂದು ಅವಳು ಬಲ್ಲಳು.

ಅವನ ಮೇಲೆ ಗೌರವವಿತ್ತು. ವಿಶ್ವಾಸವಿತ್ತು. ಪ್ರೀತಿ ಮಾತ್ರ ? ಅದ್ಯಾವ ತರಹದ ಪ್ರೀತಿ ಎಂದು ಅವಳಿಗೇ ತಿಳಿಯದು. ಅವಳು ಅವಳ ಗಂಡನನ್ನು ಪ್ರೀತಿಸುತ್ತಿರಲಿಲ್ಲ. ಮದುವೆಯಾದ ನಂತರ ಕರ್ತವ್ಯವೆಂಬಂತೆ ಅವನಿಗೆ ಒಗ್ಗಿಕೊಂಡಿದ್ದಳು. ಮೊದಮೊದಲು ಅವನ ಸಲ್ಲಾಪ ಅವಳಿಗೆ ಅಪ್ಯಾಯಮಾನವಾಗಿ ತೋರುತ್ತಿತ್ತು. ಗಂಡ ತನ್ನನ್ನು ಅತಿಯಾಗಿ ಪ್ರೀತಿಸುತ್ತಾನೆ ಆದ್ದರಿಂದಲೇ ಇಷ್ಟು ಹಿತ ಎಂದೆನಿಸುತ್ತಿತ್ತು. ಕ್ರಮೇಣ ಅದು ಹಳೆಯದಾಗ ತೊಡಗಿದಾಗ ಅವನನ್ನು ಬಯಸುತ್ತಿರಲಿಲ್ಲ. ಅವನು ಟೂರ್‌ಗೆ ಹೋಗಿದ್ದಾಗ ಹಿತವೆನಿಸುತ್ತಿತ್ತು. ಆದರೂ ಅವನಿಗಾಗಿ ಕಾಯುತ್ತಿದ್ದಳು. ಟೂರ್‌ನಿಂದ ಬಂದ ನಂತರ ಅವನು ಅಷ್ಟು ದಿನಗಳ ಪ್ರೀತಿಯನ್ನು ಒಟ್ಟಿಗೆ ಮಳೆಯಂತೆ ಸುರಿಸಿದಾಗ ಮುದಗೊಳ್ಳುತ್ತಿದ್ದಳು. ಮಧ್ಯೆ ಮಧ್ಯೆ ಒಂದೊಂದು ದಿನ ಅವನ ಮಾತಿನಿಂದ ಬೇಸರವೆನಿಸಿ ದೂರ ಮಲಗಿದಾಗ ಅವನು ಕರೆಯದಿದ್ದರೆ ಅವನಿಗೆ ತನ್ನ ಮೇಲೆ ಪ್ರೀತಿ ಕಡಿಮೆಯಾಗುತ್ತಿದೆ ಎಂದೇ ಬಗೆಯುತ್ತಿದ್ದಳು. ಕ್ರಮೇಣ ಎಲ್ಲಾ ಯಾಂತ್ರಿಕವೆನಿಸಿದಾಗ, ತನಗೊಂದು ಮಗುವಾದರೆ ಸಾಕು ಇನ್ನೇನು ಬೇಕಿಲ್ಲ ಎಂದು ಮಾತ್ರ ಯೋಚಿಸ ತೊಡಗಿದಳು.

ತನಗೊಂದು ಮಗುವನ್ನು ದಯಪಾಲಿಸದ ತನ್ನ ಗಂಡ, ತನ್ನನ್ನು ಮನಃಪೂರ್ವಕ ವಾಗಿ ಪ್ರೀತಿಸುತ್ತಿರಲಿಲ್ಲವೆಂದೇ ಅವಳ ಎಣಿಕೆ. ಆದರೂ ಮನದ ಮೂಲೆಯಲ್ಲಿ ಎಲ್ಲೋ ತಾನು ಮಾಡಿದ್ದು ತಪ್ಪೇ ! ಈ ಕಾರಣದಿಂದ ಗಂಡ ತನ್ನನ್ನು ಬಿಟ್ಟು ಹೋದನೇ ? ನನ್ನ ಮಗುವನ್ನು ತನ್ನ ಮಗುವೆಂದು ಒಪ್ಪಿಕೊಳ್ಳುವ ದೊಡ್ಡ ಹೃದಯ ಅವನಿಗಿಲ್ಲವೇ ? ಅವನಿಗಾಗಿ ತಂದೆ ತಾಯಿಗಳಿಂದ ದೂರ ಬಂದು, ಎಲ್ಲಾ ಸಹಿಸಿಕೊಂಡಿದ್ದವಳ ಆಸೆ ಇದು. ಇದೊಂದೇ ಆಸೆ ಎಂದು ಒಪ್ಪಿಕೊಂಡುಸಹಿಸಲು ಅವನಿಂದ ಸಾಧ್ಯವಿಲ್ಲವಾಯಿತೇ ?

ನಾನು ಮಾಡಿದ್ದು ತಪ್ಪು ಅಂತ ಎನಿಸಿದ್ದರೆ ಆತನಲ್ಲೂ ತಪ್ಪು ಇದೆ ಎಂದು ನನಗನ್ನಿಸುತ್ತಿರಲಿಲ್ಲವೆ? ಆದರೆ ನನಗೇಕೆ ಇದನ್ನೆಲ್ಲ ಮರೆಯಲು ಆಗುತ್ತಿಲ್ಲ? ಮತ್ತೆ ಮತ್ತೆ ನೆನಪಿಗೆ ಬರುತ್ತದಲ್ಲ.

ಹಾಗಾದರೆ ಇವನಿಗೂ ಹೀಗೆ ಅನಿಸುತ್ತಿದೆಯೆ ? ಇವನ ಹೆಂಡತಿಯೂ ಇವನನ್ನು ಬಿಟ್ಟು ಓಡಿ ಹೋದಳಲ್ಲ...ಇವನಿಗೂ ಅವಳು ಮತ್ತೆ ಮತ್ತೆ ನೆನಪಿಗೆ ಬರುತ್ತಾಳೆಯೇ ? ಕೇಳಿ ತಿಳಿದುಕೊಳ್ಳಬೇಕು.

ಅವನನ್ನು ಹಿಂದಕ್ಕೆ ತಳ್ಳಿ ಪ್ರಶ್ನಿಸಿದಳು.

"ನೀವು ನಿಜ ಹೇಳಬೇಕು.... ನಿಮಗೆ ನಿಮ್ಮ ಹೆಂಡತಿಯನ್ನ ಮರೆಯಲು ಸಾಧ್ಯವಾಗಿದೆಯೆ ?" ಅವನು ತಬ್ಬಿಬ್ಬುಗೊಂಡ.

"ಆ ಮಾತು ಈಗೇಕೆ ? ಅದೂ ಈ ಹೊತ್ತಿನಲ್ಲಿ? "

"ಏನೋ ಕೇಳಬೇಕು ಅಂತ ಅನ್ನಿಸ್ತು. ಹೇಳಿ..."

"ಒಂದು ಸಲ ನನ್ನ ಜೀವನದಲ್ಲಿ ಸಂಗಾತಿಯಾಗಿ ಬಂದವಳು ಅವಳು. ಹೇಗೆ ಮರೆಯಕ್ಕೆ ಸಾಧ್ಯ ಹೇಳು. ನನ್ನ ಮಗುವನ್ನು ನೋಡಿದಾಗಲೆಲ್ಲಾ ಅವಳು ನೆನಪಾಗುತ್ತಲೇ ಇರ್ತಾಳೆ! ಈಗೇಕೆ ಕೇಳಿದೆ ಅದನ್ನು ?"

ಐದಾರು ವರ್ಷಗಳ ಹಿಂದೆ ನಡೆದದ್ದನ್ನೇ ಮರೆಯಲು ನಿಮ್ಮಿಂದ ಸಾಧ್ಯವಾಗಲಿಲ್ಲ. ಅಂದಮೇಲೆ ನನ್ನದೇನು? ನನ್ನ ಗಂಡನ ನೆನಪು ನನ್ನನ್ನು ಕಾಡುತ್ತೆ. ಅದನ್ನ ನನ್ನ ಮನಸ್ಸಿನಲ್ಲಿಟ್ಟು ಕೊಂಡು ನಿಮ್ಮ ಜತೆ ಹೇಗೆ ಬಾಳಲಿ...?

"ಅಂದರೆ ನಿನ್ನ ಮಾತಿನ ಅರ್ಥವೇನು ?"

"ಅದನ್ನೆಲ್ಲಾ ಪೂರ್ತಿ ಮರೆಯುವಂತೆ ಹೇಗಾದರೂ ಮಾಡಿ. ಏನಾದರೂ ಔಷಧಿ ಕೊಡಿ.... ಮರೆಯಲೂ ಆಗದೇ, ನಿಮ್ಮೊಡನೆ ಇರಲೂ ಆಗದೆ ನಾನು ಬಾಳಲಾರೆ."

"ಏನೇನೋ ಮಾತನಾಡಬೇಡ ಸಂಧ್ಯಾ. ಕ್ರಮೇಣ ಎಲ್ಲಾ ಮರೆಯುತ್ತೆ. ನಾನು ನನ್ನ ಹೆಂಡತೀನ ಮರೆತಿಲ್ಲ ನಿಜ. ಆದರೆ ಅವಳಿಗೆ ಮೋಸವನ್ನೇನು ಮಾಡುತ್ತಿಲ್ಲವಲ್ಲ ನಾನು." ಅವಳು ಓರೆಗಣ್ಣಿನಿಂದ ನೋಡಿದಳು.

"ಒಂದು ವೇಳೆ ಅವಳು ವಾಪಸ್ಸು ಬಂದರೆ, ಅವಳನ್ನು ಮತ್ತೆ ಸ್ವೀಕರಿಸುತ್ತೀರಾ ? "

"ಚೆನ್ನಾಗಿದೆ ನಿನ್ನ ಮಾತು. ಅವಳು ಮತ್ತೆಬರುವುದು ಸಾಧ್ಯವೇ ಇಲ್ಲ. ನಿನ್ನ ಗಂಡ ಬಂದು ಕರೆದರೆ ನೀನು ಹೋಗ್ತೀಯಾ ?"

"ಅದು ಅಸಾಧ್ಯ. ಅವರು ಕರೆಯುವಷ್ಟು ದೊಡ್ಡ ಮನಸ್ಸಿನವರಾಗಿದ್ದರೆ ಬಿಟ್ಟೇಕೆ ಹೋಗುತ್ತಿದ್ದರು ?"

"ನನ್ನ ಹೆಂಡತಿಯಾಗಲೀ, ನಿನ್ನ ಗಂಡನಾಗಲೀ, ಮತ್ತೆ ನಮ್ಮ ಜೀವನದಲ್ಲಿ ಪ್ರವೇಶಿಸಿದರೆ, ಅವರ ತಪ್ಪನ್ನು ಅವರಿಗೆ ತಿಳಿಸಿ ತಿಳುವಳಿಕೆ ಹೇಳಿ ಕಳಿಸಿಬಿಡೋಣ. ಇನ್ನು ಮುಂದೆ ನಮ್ಮಿಬ್ಬರ ಮಧ್ಯೆ ಯಾರೂ ಬರಬಾರದು. ನಮ್ಮ ಜೀವನ ಕೇವಲ ನಮ್ಮಿಬ್ಬರದೇ ಆಗಬೇಕು. ಏನಂತೀಯ .....? "

"ಹೂಂ "ಎಂದಳು ಪೆದ್ದಾಗಿ.

"ಇದಿಷ್ಟಕ್ಕೇ ಎಷ್ಟು ಕೊರಗ್ತೀಯ ? ನಾನು ನಿನ್ನ ಜತೆ ಇರುವವರೆಗೂ ನಿನಗೆ ಯಾವ ಭಯವೂ ಇಲ್ಲ. ಸುಮ್ಮನೇ ಅನಾವಶ್ಯಕವಾಗಿ ಕೊರಗಿ, ನನ್ನ ಮಗುವಿನ ಆರೋಗ್ಯವನ್ನು ಕೆಡಿಸಬೇಡ... ಎಚ್ಚರಿಕೆ" ಬೆರಳು ತೋರಿದ.

"ನೀವೆಷ್ಟು ಸ್ವಾರ್ಥಿಗಳು. ...." ಅವಳು ತುಟಿಯಂಚಿನಲ್ಲಿ ನಕ್ಕಳು.

"ಈ ಸ್ವಾರ್ಥವನ್ನು ಕಲಿಸಿಕೊಟ್ಟವಳು ನೀನೇ" ಎನ್ನುತ್ತಾ ಅವಳ ತಲೆಯ ಮೇಲೆ ಮೊಟಕಿದ. ಈ ಮಾತುಗಳು ಕೇವಲ ಒಬ್ಬರನ್ನೊಬ್ಬರು ಮೆಚ್ಚಿಸುವುದಕ್ಕೆ ಮಾತ್ರ. ಅಂತರಾಳದಲ್ಲಿ ಪ್ರೀತಿ ಅಡಗಿದೆಯೋ ಇಲ್ಲವೋ, ಎಲ್ಲವನ್ನೂ ಮರೆತಿರುವಂತೆ ನಾಟಕವನ್ನು ಮಾತ್ರ ಆಡಬೇಕು ಎಂದು ಇಬ್ಬರಿಗೂ ತಿಳಿದಿತ್ತು.

ಇದ್ದಕ್ಕಿದ್ದಂತೆ ಅವನಿಗೆ ತಾನು ಅವಳ ಗಂಡನನ್ನು ಹುಡುಕಿ, ಅವನಿಗೆ ತಿಳುವಳಿಕೆಯ ಸಮಾಧಾನವನ್ನು ಹೇಳಿ, ಅವಳನ್ನು ಮತ್ತೆ ಸ್ವೀಕರಿಸುವಂತೆ ಕೇಳಿಕೊಳ್ಳಬೇಕು ಅಂತ ಅನ್ನಿಸಿತು. ಈ ಮಗು ಅವಳ ಹೊಟ್ಟೆಯಲ್ಲಿ ಇರುವವರೆಗೆ ಅವನು ಒಪ್ಪಲಾರ. ಅವಳಿಗೆ ಹೆರಿಗೆಯಾದ ನಂತರ ಮತ್ತೆ ಅವಳನ್ನು ಕಳಿಸಿಬಿಡಬೇಕು. ಈ ಅನಿಸಿಕೆ ಅವನಲ್ಲಿ ಬಲವಾಯಿತು. ಆದರೆ ಆ ವಿಷಯವನ್ನು ಸಂಧ್ಯಾಳೊಡನೆ ಚರ್ಚಿಸಲಿಲ್ಲ.

ನಂತರದ ದಿನಗಳೆಲ್ಲಾ ಯಾಂತ್ರಿಕವಾಗಿ ಕಳೆದವು. ಸಂಧ್ಯಾಳ ಮನೆಯ ಸಾಮಾನುಗಳೆಲ್ಲಾ ಹಾಗೇ ಆ ಮನೆಯಲ್ಲಿಯೇ ಉಳಿದವು. ಅದು ಅವಳ ಗಂಡನ ಹಾಗೂ ಅವಳ ಸ್ವತ್ತು. ತನಗೆ ಅದರ ಮೇಲೆ ಅಧಿಕಾರವಿಲ್ಲವೆನ್ನುವುದನ್ನು ತಿಳಿದಿದ್ದ. ಬಾಗಿಲಿಗೆ ಒಂದು ಭಾರಿ ಬೀಗವನ್ನು ಹಾಕಿಸಿದಳು. ಅದರ ಬೀಗದ ಕೈಯನ್ನು ಪಕ್ಕದ ಮನೆಯವರಿಗೆ ಕೊಟ್ಟು ಅವರ ಕುತೂಹಲವನ್ನು ತಣಿಸಿದಳು.

"ನಾನು ನನ್ನ ತವರಿಗೆ ಹೋಗುತ್ತಿದ್ದೇನೆ. ಈ ಸಾರಿ ಅವರು ತುಂಬಾ ದಿನದ ಟೂರ್ ಅಂತ ಹೊರಗೇ ಇರ್ತಾರೆ ಅಂತ ಹೇಳಿದಳು. ಆ ಹೆಂಗಸು ನಂಬಿದಳೋ ಇಲ್ಲವೋ . ತನ್ನ ಇಷ್ಟದ , ಸ್ವಂತವಾದ ಕೆಲವು ಸಾಮಾನುಗಳನ್ನು ಮಾತ್ರ ತೆಗೆದಿರಿಸಿದ್ದಳು. ಅದನ್ನು ಎಸ್ಟೇಟಿನ ಮನೆಗೆ ತರುವ ಧೈರ್ಯವಿರಲಿಲ್ಲ. ಗೀತಳ ಮನೆಯಲ್ಲಿ ಇರಿಸಿ "ಸದ್ಯಕ್ಕೆ ಇವುಗಳು ಇಲ್ಲಿರಲಿ, ನನಗೆ ಈಗ ಇವುಗಳ ಅವಶ್ಯಕತೆ ಇಲ್ಲ" ಎಂದಳು. ಗೀತ ಅವುಗಳನ್ನು ಅಟ್ಟದ ಮೇಲಿರಿಸಿದಳು.

ದಿನೇಶ ಸಿಟಿಗೆ ಬಂದಾಗ ಒಬ್ಬ ಏಜೆಂಟನನ್ನು ಗೊತ್ತುಮಾಡಿ, ಸಂಧ್ಯಾಳ ಗಂಡನ

ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿದ. ಸಂಧ್ಯಾಳಿಗೆ ತಿಳಿಯದಂತೆ ಒಂದು ದಿನ ಅವನು ಕೆಲಸ ಮಾಡುತ್ತಿದ್ದ ಕಂಪೆನಿಗೆ ಹೋಗಿ ವಿಚಾರಿಸಿದ.

"ಸಧ್ಯಕ್ಕೆ ಅವರು ರಜೆಯ ಮೇಲಿದಾರೆ. ಅವರಿಗೆ ಬೇರೆ ಊರಿಗೆ ವರ್ಗವಾಗಿದೆ ಎಂದು ಆಫೀಸಿನವರು ತಿಳಿಸಿದರು. ಅವರಿಂದ ಬೆಳಗಾಂನ ಆಫೀಸಿನ ವಿಳಾಸವನ್ನು ಪಡೆದು ಹಿಂತಿರುಗಿದ. ತಾನೇನನ್ನೋಸಾಧಿಸಲು ಹೊರಟಿದ್ದೇನೆ ಎಂಬ ಅಹಂ ತುಂಬಿದಂತೆ ಅವನ ಮುಖ ದಪ್ಪಗಾಗಿತ್ತು"

ಈ ವಿಷಯಗಳ ಬಗ್ಗೆ ಈಗಲೇ ಗೀತಳೊಡನೆ ಮಾತನಾಡುವ ಮನಸ್ಸಿರಲಿಲ್ಲ. ಅವಳು ಬುದ್ಧಿ ಹೇಳುವಳೆಂದು ಅವನಿಗೆ ಗೊತ್ತಿತ್ತು. 'ಸಂಧ್ಯಾ ತನ್ನ ಸ್ವಂತವಲ್ಲ' ಎಂದು ಅವಳಿಗೆ ಹೇಳಿದರೆ ಅವಳು ಉಪದೇಶ ಮಾಡದೇ ಬಿಡುತ್ತಾಳೆಯೇ ? ಆದರೆ ಅವಳನ್ನು ಮಾತ್ರ ಚೆನ್ನಾಗಿ ನೋಡಿಕೊಂಡ. ಅವಳಿಗೆ ಯಾವುದರಲ್ಲೂ ಕೊರತೆ ಆಗದಂತೆ ವಿಚಾರಿಸತ್ತಿದ್ದ. ಉಪಚರಿಸುತ್ತಿದ್ದ.

ನಮ್ಮ ಅತ್ತಿಗೆಗೆ ಎಲ್ಲಾ ಗೊತ್ತು. ಅವರನ್ನು ಕೇಳಿ ಎಲ್ಲ ತಿಳಿದುಕೋ ಎಂದು ಆಗಾಗ್ಗೆ ಹೇಳುತ್ತಿದ್ದ. ಒಮ್ಮೊಮ್ಮೆ ಅವಳಿಗೆ ಬೇಸರವೆನಿಸುತ್ತಿತ್ತು.

"ಎಲ್ಲಾದನ್ನು ಅವರನ್ನೇನು ಕೇಳುವುದು ? ಬಿಡಿ, ತಾನಾಗಿಯೇ ತಿಳಿಯುತ್ತೆ" ಎನ್ನುತ್ತಿದ್ದಳು. ಮನೆಯ ಅಡಿಗೆ ಕೆಲಸ ಮಾತ್ರ ಇವಳದ್ದು. ಉಳಿದುದೆಲ್ಲವನ್ನು ಮಾಡಲು ಕೆಲಸದವಳು ಇದ್ದಳು. ಅವಳಿಗೆ ಸಯಮ ಕಳೆಯಲು ಕಷ್ಟವೆನಿಸುತ್ತಿತ್ತು. ದಿನೇಶ ಮನೆಯಲ್ಲೇ ಇದ್ದು ಅವಳ ಹಿಂದೆ ಮುಂದೆ ಮಾತನಾಡುತ್ತಾ ತಿರುಗುತ್ತಿದ್ದರೆ, ನನ್ನನ್ನು ಒಂಟಿಯಾಗಿ ಬಿಡಬಾರದೆ! ಎಲ್ಲಾದರೂ ಹೊರಗೆ ಹೋಗಬಾರದೇ ಎಂದೆನಿಸುತ್ತಿತ್ತು. ಒಬ್ಬಳೇ ತುಂಬಾ ಹೊತ್ತು ಇರಬೇಕಾದ ಸಮಯ ಬಂದಾಗ ಏನೋ ಗಾಬರಿ ಎನಿಸುತ್ತಿತ್ತು. ಹಿಂದಿನ ದಿನಗಳು ಬಂದು ಎದುರಿಗೆ ಕುಣಿಯುವಂತೆ ಅನ್ನಿಸುತ್ತಿತ್ತು. ಸ್ವಲ್ಪ ಸದ್ದಾದರೂ ತನ್ನ ಗಂಡ ಬಂದಿರಬಹುದೆಂಬ ಅನಿಸಿಕೆಯಿಂದ ಬೆಚ್ಚುತ್ತಿದ್ದಳು.

ಅವನಾಗಿಯೇ ತನ್ನನ್ನು ಬಿಟ್ಟು ಹೋಗಿರುವಾಗ ಮತ್ತೆ ಬರಲಾರ ಅಂತ ಎನ್ನಿಸಿದರೂ, ಏಕೋ ಏನೋ ಒಂದಲ್ಲ ಒಂದು ದಿನ ಅವನು ತನ್ನನ್ನು ಹುಡುಕಿಕೊಂಡು ಬರುತ್ತಾನೆ ಎಂದೇ ಅನ್ನಿಸುತ್ತಿತ್ತು. ಅವನು ತನ್ನನ್ನು ಕ್ಷಮಿಸಿ, ಕರೆದರೆ ಹೋಗಿಬಿಡಲೇ ? ಎಂದೂ ಸಹ ಚಿಂತಿಸುತ್ತಿದ್ದಳು.

ತೋಟದ ಕೆಲಸ ಕಾರ್ಯದಲ್ಲಿ ನಿರತನಾಗಿದ್ದಾಗ, ಮನೆಯ ಚಿಂತೆ ಹೆಚ್ಚಾಗಿ ಬಾಧಿಸುತ್ತಿರಲಿಲ್ಲ. ಮನೆಗೆ ಬಂದಾಗ, ಸಂಧ್ಯಳ ಉದಾಸೀನ ಭಾವದ ಮುಖವನ್ನು ಕಂಡಾಗ ಚಿಂತೆಗಳು ಮರುಕಳಿಸುತ್ತಿದ್ದವು. ಅವಳನ್ನು ಹರ್ಷಗೊಳಿಸಲು ಅವಳ ಹಿಂದೆ ಮುಂದೆ ತಿರುಗಾಡುತ್ತಾ ತಮಾಷೆಯ ಮಾತುಗಳನ್ನಾಡುತ್ತಾ ಅವಳನ್ನು ಮುದಗೊಳಿಸಲು ಯತ್ನಿಸುತ್ತಿದ್ದ. ಒಂದೊಂದುಸಲ ತಾನು ಒಂಟಿಯಾಗಿದ್ದಾಗ ಆ ದಿನಗಳೇ ಆರಾಮವಾಗಿದ್ದವು

ಅಂತ ಎನ್ನಿಸಿದಾಗ , ಅವಳು ಅಸಹಾಯಕಳಾಗಿ ಮರದ ಕೆಳಗೆ ನಿಂತಿದ್ದು ತನ್ನ ಕಣ್ಣಿಗೇಕೆ ಗೋಚರಿಸಿತು ಎಂದು ತನಗೆ ತಾನೇ ಪ್ರಶ್ನಿಸಿಕೊಳ್ಳುತ್ತಿದ್ದ! ಯಾವುದೋ ಗಳಿಗೆಯಲ್ಲಿ ತನಗೆ ಸುತ್ತಿಗೊಂಡ ಈ ಬಂಧ ಯಾವ ಸುಖಕ್ಕೆ ಎಂದು ಗೊತ್ತಾಗಲಿಲ್ಲ. ಖೇದವೆನಿಸುತ್ತಿತ್ತು.

ಗೀತಳಿಗೆ ಪರಿಚಯವಿದ್ದ ಲೇಡಿ ಡಾಕ್ಟರರ ಬಳಿಗೇ ಸಂಧ್ಯಳನ್ನು ಚೆಕಪ್‌ಗೆ ಕರೆದುಕೊಂಡು ಹೋಗಿದ್ದಳು. ಸಂಧ್ಯಾಳ ಅನ್ಯಮನಸ್ಕತೆಯನ್ನು ಕಂಡು ಡಾಕ್ಟರು ಎಚ್ಚರ ವಹಿಸುವಂತೆ ಹೇಳಿದ್ದರು. ದಿನೇಶನಿಗೂ ಚಿಂತೆಯಾಗಿತ್ತು.

ಮೊದಲಿನ ನಿತ್ರಾಣ, ಬಳಲಿಕೆ ಆಯಾಸ ಕಡಿಮೆ ಆಗಿತ್ತು. ತನ್ನನ್ನು ಮುತುವರ್ಜಿ ಯಿಂದ ನೋಡಿಕೊಳ್ಳುತ್ತಿರುವ ದಿನೇಶನನ್ನು ಕೃತಜ್ಞತೆಯಿಂದ ನೋಡುತ್ತಿದ್ದಳು. ಕೇವಲ ತನ್ನ ಮಗುವಿಗಾಗಿ ಇಷ್ಟು ಆಸಕ್ತಿ ವಹಿಸುತ್ತಿರುವನೇ ಅಂತ ಅನ್ನಿಸಿದಾಗ ಮನಸ್ಸು ಮುದುಡುತ್ತಿತ್ತು.

ತಿಂಗಳುಗಳು ಉರುಳಿದವು. ಒಡಲಲ್ಲಿ ಪುಟ್ಟ ಜೀವ ಮಿಡುಕಾಡುವಾಗ, ಅವಳಲ್ಲಿ ತಾಯ್ತನದ ಚೈತನ್ಯ ಹರಿಯಲಾರಂಭಿಸಿತು. ಮಗುವಿನ ಮೇಲಿನ ಮಮತೆ ಅಧಿ ಕವಾಯಿತು. ಈ ಮಗುವಿನ ತಂದೆ ದಿನೇಶ. ಅವನಿಂದ ನನಗೆ ಈ ಭಾಗ್ಯ ಸಿಕ್ಕಿದೆ ಎಂದು ಮುದಗೊಳ್ಳುತ್ತಿದ್ದಳು. ಆದರೆ ಕೆಲವೊಮ್ಮೆ ಈ ಮಗುವಿಗೋಸ್ಕರ ತಾನು ಹಿಡಿದ ದಾರಿ ಸರಿಯಾಗಿರಲಿಲ್ಲವೇನೋ ... ತನ್ನೊಡನೆ ಬಾಳ್ವೆ ನಡೆಸಿದ, ತನ್ನ ಗಂಡ ಈ ಮಗುವನ್ನು ಒಪ್ಪಿಕೊಳ್ಳಲು ಸಿದ್ಧನಾಗಿರಲಿಲ್ಲವಲ್ಲ ಅಂತ ವ್ಯಥೆಯಾಗುತ್ತಿತ್ತು.

ಅವಳ ಒಡಲು ಬೆಳೆದಿತ್ತು. ನೋಡಿದವರಿಗೆ ಅವಳು ಗರ್ಭಿಣಿ ಎಂದು ತಿಳಿಯುತ್ತಿತ್ತು. ದಿನೇಶ ಅವಳ ಹಾವಭಾವಗಳನ್ನು ಮೈಯ ಸಿರಿಯನ್ನು ಕದ್ದು ಮುಚ್ಚಿ ನೋಡಿ ಆನಂದಗೊಳ್ಳುತ್ತಿದ್ದ. ಅವಳ ಅನುಭವಗಳನ್ನು ತಿಳಿಯುವಂತಿದ್ದರೆ...ಅಂತ ಅವಳ ಒಡಲ ಮೇಲೆ ಮುಖವನ್ನಿಟ್ಟು ಪುಟ್ಟ ಕಂದನ ಉಸಿರಾಟವನ್ನು ಕೇಳಿ ಆನಂದ ಪಡುವಂತಿದ್ದರೆ... ಎಂದೆಲ್ಲಾ ಯೋಚಿಸುತ್ತಿದ್ದ. ಅಲಕ ಈ ಭಾಗ್ಯವನ್ನು ಒದಗಿಸಿರಲಿಲ್ಲ.

ತನ್ನ ಗ್ರಹಚಾರಕ್ಕೆ ತನ್ನನ್ನು ತಾನೇ ಹಳಿದುಕೊಳ್ಳುತ್ತಿದ್ದ. ಗರ್ಭಿಣಿಯಾಗಿದ್ದ ಅಲಕಾ ಒಂದು ದಿನವೂ ಸಂತಸ ಪಡಲಿಲ್ಲ, ತನ್ನ ಅನುಭವಗಳನ್ನು ಹೇಳಿಕೊಳ್ಳಲಿಲ್ಲ, ನಾನೇನೋ ಅತ್ಯಾಚಾರ ಮಾಡಿದ್ದವನಂತೆ, ತನ್ನಿಂದ ದೂರವಿದ್ದು, ತನ್ನೊಂದಿಗೆ ಯಾವ ವಿಷಯಗಳನ್ನು ತಿಳಿಸುತ್ತಿರಲಿಲ್ಲ. ಈಗ ಇವಳದು ಇನ್ನೊಂದು ರೀತಿ. ನನ್ನಿಂದ ಅಪರಾಧವನ್ನು ಮಾಡಿಸಿದ್ದು ಇವಳು.ಆದರೂ ನನಗೆ ಹತ್ತಿರವಾಗಿಲ್ಲ. ತನ್ನೊಡನೆ ಯಾವುದೇ ವಿಷಯವನ್ನು ಹೇಳುವುದಿಲ್ಲ. ತಾಯ್ತನದ ಹೆಮ್ಮೆಯ ಅನುಭವ ಹೆಂಗಸಿಗೆ ಮಾತ್ರ. ಆ ಸುಂದರ ಅನುಭವಗಳನ್ನು ತಿಳಿಯುವ ಆಸೆ ಆಸೆಯಾಗಿಯೇ ಉಳಿಯಿತು.... ಅವಳೂ ಹೆಂಡತಿ, ಇವಳೂ ಹೆಂಡತಿ, ಆದರೆ, ಇಬ್ಬರೂ ನನಗೆ ಸ್ವಂತದವರಾಗಲಿಲ್ಲ. ಅವಳು ನನಗೆ ದ್ರೋಹಮಾಡಿ ಪರಪುರುಷನೊಂದಿಗೆ ಓಡಿ ಹೋದಳು. ಇವಳು ತನ್ನ ಪತಿಗೆ ಮೋಸಮಾಡಿ, ನನ್ನ ಬಳಿಗೆ ಬಂದಳು.ಅವಳನ್ನು ಕ್ಷಮಿಸಿದೆ ಇವಳನ್ನು ಕ್ಷಮಿಸಿದೆ. ಆದರೆ ನನಗೆ ಸಿಕ್ಕಿದ್ದು !

ಅವಳೂ ನನ್ನನ್ನು ಪ್ರೀತಿಸಲಿಲ್ಲ. ಇವಳೂ ನನ್ನನ್ನು ಪ್ರೀತಿಸುತ್ತಿಲ್ಲ. ಮಗಳ ಬಾಯಿಂದ ಅಪ್ಪಾ ಎಂದು ಕರೆಸಿಕೊಳ್ಳುವ ಅದೃಷ್ಟನನಗಿಲ್ಲ. ಆದರೂ ಈ ಹುಟ್ಟಲಿರುವ ಈ ಮಗುವಿಗಾದರೂ ತಾನು ಎಲ್ಲಾ ರೀತಿಯಿಂದಲೂ ಅಪ್ಪನಾಗಬೇಕು.ಅದಕ್ಕೆ ಅವಳು ಆಸ್ಪದ ಕೊಡದಿದ್ದರೆ, ಹುಚ್ಚನಾಗಿ ಬಿಡುತ್ತೇನೆ ಅಷ್ಟೇ .... ಹಾಗಾಗಬಾರದು ಎಂದುಕೊಂಡು, ಗೀತಳ ಬಳಿ ಮಾತನಾಡಿದ. ಅವಳೂ ವ್ಯಥೆಗೊಂಡಳು. ಸಮಾಧಾನದ ಮಾತುಗಳನ್ನಾಡಿದಳು. ಅನನ್ನು ಮುದಗೊಳಿಸಲು ಸಂಧ್ಯಾಳಿಗೆ ಆರತಿಯ ಶಾಸ್ತ್ರವನ್ನು ನೆರವೇರಿಸುವುದಕ್ಕೆ ಸಿದ್ಧತೆಗಳನ್ನು ಮಾಡಿದಳು.

ಹಸಿರು ಸೀರೆ, ಹಸಿರು ರವಿಕೆಯನ್ನು ಉಡಿಸಿ, ಹಸಿರು ಬಳೆಗಳನ್ನು ತೊಡಿಸಿ, ಉಂಡೆ ಚಕ್ಕುಲಿಗಳನ್ನು ಮಾಡಿಸಿ, ಹಣ್ಣು ಹಂಪಲುಗಳ ಮಡಿಲನ್ನು ತುಂಬಿ ಆರತಿಯನ್ನು ಎತ್ತಿದಳು. ದಿನೇಶ ಅತ್ತಿಗೆಗೆ ಕೃತಜ್ಞತೆಯನ್ನು ಕಣ್ಣಿನಲ್ಲೇ ಹೇಳಿದ. ಅವನು ಹರ್ಷಗೊಂಡಿದ್ದು ಅವಳಿಗೂ ಸಮಾಧಾನವಾಗಿತ್ತು.

"ಇನ್ನೇನು ಏಳನೇ ತಿಂಗಳು ತುಂಬುತ್ತೆ, ಅವಳು ಅಲ್ಲಿ ಕಾಡಿನಲ್ಲಿ ಯಾಕೆ ಇರಬೇಕು ಇಲ್ಲಿ ನಮ್ಮ ಮನೆಯಲ್ಲೇ ಇರಲಿ" ? ಎಂದಿದ್ದಳು.

"ಅಲ್ಲಿ ನಾನು ಒಂಟಿಯಾಗಿರುತ್ತೀನಿ.... ಅಲ್ಲದೆ ಅವಳು ಇಲ್ಲಿದ್ದರೆ ಇನ್ನು ಮುದುರಿ ಹೋಗ್ತಾಳೆ. "

"ಹೌದು, ಅವಳಿಗೆ ಅಲ್ಲಿ ಸ್ವಾತಂತ್ರ್ಯವಿರುತ್ತೆ. ನಾನು ಡಾಕ್ಟರ ಹತ್ತಿರ ಮಾತನಾಡ್ತೀನಿ." ಎಂದಳು.

"ನಿನ್ನ ಅನುಭವಗಳನ್ನು ಅವನೊಡನೆ ಹಂಚಿಕೊ, ಅಲಕಾ ಅವನಿಗೆ ವಂಚನೆ ಮಾಡಿಬಿಟ್ಟಳು. ನೀನಾದರೂ ಅವನ ಮನಸ್ಸನ್ನು ಅರಿತು ಕೊಳ್ಳಲು ಪ್ರಯತ್ನಿಸು" ಎಂದು ಸಂಧ್ಯಾಳಿಗೆ ಉಪದೇಶ ಮಾಡಿದ್ದಳು. ಹೀಗೆ ಮುಂದುವರಿದರೆ ಯಾವ ಪುರುಷಾರ್ಥ ಎಂದು ಅನ್ನಿಸುತ್ತಿತ್ತು. ಆದರೆ ಸಂಧ್ಯಾ ಅವಳ ಮಾತಿಗೆ ಕಿವಿಗೊಟ್ಟರಲಿಲ್ಲ.

ಗೀತಳ ಸಲಹೆಯಂತೆ, ಹೆರಿಗೆಗೆ ಹದಿನೈದು ದಿನಗಳಿವೆ ಎನ್ನುವಾಗಲೇ ಸಂಧ್ಯಾ ದಿನೇಶ ಅಣ್ಣನ ಮನೆಗೆ ಬಂದು ಇಳಿದುಕೊಡಿದ್ದರು. ಗೀತ ಉತ್ಸಾಹದಿಂದ ಇಬ್ಬರನ್ನು ಉಪಚರಿಸಿದಳು. ಸಂಧ್ಯಾ ಸಂತೋಷದಿಂದ ನಗುನಗುತ್ತಾ ಇರುವಂತೆ ಅವಳ ಕಡೆ ಗಮನ ಕೊಡುತ್ತಿದ್ದಳು. ದಿನೇಶನಿಗೂ ಆತಂಕ ಕಡಿಮೆಯಾಗಿತ್ತು.

ಆದಷ್ಟು ಬೇಗ ತಾನು ಅಂದುಕೊಂಡ ಕೆಲಸ ಮುಗಿಸಿ ಬಿಡಬೇಕು ಎಂದುಕೊಂಡು ತಾನು ಒಂದೆರಡು ದಿನಗಳ ಮಟ್ಟಿಗೆ ಬೆಳಗಾಂಗೆ ಹೋಗಿ ಬರುತ್ತೇನೆಂದು ಅತ್ತಿಗೆಗೆ ಮಾತ್ರ ತಿಳಿಸಿ ಹೊರಟ.

ಹೋಟೆಲ್ಲಿನಲ್ಲಿ ಇಳಿದುಕೊಂಡು, ಸಂಧ್ಯಳ ಗಂಡ ರಘುನಾಥ ಕೆಲಸ ಮಾಡುತ್ತಿದ್ದ ಆಫೀಸಿಗೆ ಬಂದು ಅವನನ್ನು ಭೇಟಿಯಾದ. ತಾನಾಗಿಯೇ ತನ್ನ ಪರಿಚಯವನ್ನು

ಹೇಳಿಕೊಂಡು, ಮುಖ್ಯವಾದ ವಿಷಯ ಮಾತನಾಡುವುದಿದೆ "ನನ್ನ ಹೋಟೆಲಿಗೆ ಬನ್ನಿ" ಎಂದು ಆಹ್ವಾನಿಸಿದ. ಅವನು ಏನೋ ಸಮಸ್ಯೆಯಲ್ಲಿದ್ದಾನೆಂದು ಮುಖ ನೋಡಿಯೇ ತಿಳಿಯಬಹುದಾಗಿತ್ತು. ಯಾ ಮುಚ್ಚುಮರೆ ಇಲ್ಲದೇ ಎಲ್ಲವನ್ನು ಹೇಳಿಬಿಡಬೇಕೆಂದುಕೊಂಡ.

ಕೆಲಸ ಮುಗಿದ ನಂತರ,ರಘುನಾಥ ಅವನಿದ್ದ ಹೋಟೆಲಿಗೇ ಬಂದ. ಕಾಫಿ ತಿಂಡಿಯ ಉಪಚಾರ ಮುಗಿದನ ನಂತರ, ದಿನೇಶನೇ ಮಾತಿಗೆ ಆರಂಭಿಸಿದ.

"ನಿಮ್ಮ ಪತ್ನಿ ಸಂಧ್ಯಾ ನಮ್ಮ ಮನೆಯಲ್ಲಿದಾರೆ... ಅವರ ಬಗ್ಗೆ ಮಾತನಾಡೋಣ ಅಂತ ಈ ಊರಿಗೆ ಬಂದೆ" ಎಂದು ಹೇಳಿ ನೇರವಾಗಿ ಅವನ ಮುಖವನ್ನೇ ದಿಟ್ಟಿಸಿ ನೋಡಿದ.

ಅವನ ಮುಖದ ಭಾವನೆಗಳು ಬದಲಾದವು.ಆದರೂ ಚೇತರಿಸಿಕೊಂಡು ನುಡಿದ.

"ಯಾವ ಸಂಧ್ಯಾ ? ನನ್ನ ಹೆಂಡತಿಯ ಹೆಸರು ಸಂಧ್ಯಾ ಅಲ್ಲ"

"ಪ್ಲೀಸ್... ನಾಟಕ ಆಡಬೇಡಿ. ನಿಮ್ಮ ಎಲ್ಲ ವಿಷಯಗಳನ್ನು ತಿಳಿದೇ ನಾನು ಇಲ್ಲಿಗೆ ಬಂದಿದೀನಿ. ಸಂಧ್ಯಾ ನಿಮ್ಮ ಹೆಂಡತಿ ಆಗಿರಲಿಲ್ಲವೆ ? ನೀವು ಅವರನ್ನು ಬಿಟ್ಟು ಬರಲಿಲ್ಲವೆ ! " ನೀವು ಬರೆದ ಪತ್ರವನ್ನು ಅವರು ನನಗೆ ತೋರಿಸಿದ್ದಾರೆ.

ಅವನ ಮುಖ ಕಪ್ಪಿಟ್ಟಿತು. ಸಂಧ್ಯಾಳಿಗೂ ನಿಮಗೂ ಏನು ಸಂಬಂಧ ? ಅವನು ಪ್ರಶ್ನಿಸಿದ.

"ಸಂಬಂಧವಿದೆ . ಆದುದರಿಂದಲೇ ನಿಮ್ಮೊಡನೆ ಮಾತನಾಡಲು ಬಂದೆ... ನೀವು ನಿಮ್ಮ ಹೆಂಡತಿಯನ್ನು ಅರ್ಥ ಮಾಡಿಕೊಂಡಿದ್ದೆಷ್ಟು ! ಆಕೆಯ ಆಸೆ ಏನು ಅಂತ ತಿಳಿದು ಕೊಂಡಿದ್ರಾ ? ನಿಮ್ಮಿಂದ ಅವರಿಗೆ ಅನ್ಯಾಯ ಆಗಿರಲಿಲ್ವಾ ?"

"ನನ್ನ ಹೆಂಡತಿಯ ಬಗ್ಗೆ ನನಗಿಂತ ಹೆಚ್ಚಿಗೆ ನಿಮಗೆ ಗೊತ್ತೇ ?" ಕೆಟ್ಟ ನಗೆ ನಕ್ಕ.

"ಗೊತ್ತು ಅವಳು ನನಗೆ ಎಲ್ಲವನ್ನು ಹೇಳಿದಾಳೆ. ನನ್ನೊಡನೆ ಸಂಬಂಧವನ್ನು..."

"ಓಹೋ ನೀವೇಯೋ ಅವಳ ಮಹಾಪುರುಷ ?" ವ್ಯಂಗ್ಯದಿಂದ ಕೇಳಿದ.

"ಇವತ್ತಿಗೂ ಅವಳಿಗೆ ನಿಮ್ಮ ಮೇಲೆ ಗೌರವವಿದೆ. ವಿಶ್ವಾಸವಿದೆ. ಪ್ರೀತಿ ಇದೆ. "

"ಹಾಗಾದರೆ ಇಂತಹ ನೀಚ ಕೆಲಸವನ್ನೇಕೆ ಮಾಡಿದಳು ! ಅಥವಾ ಅವಳ ತಲೆಯನ್ನು ಕೆಡಿಸಿದವರು ನೀವೇಯೋ...?" ಮತ್ತೆ ಹಂಗಿಸಿ ಕೇಳಿದ.

"ನಿಮ್ಮ ವ್ಯಂಗ್ಯದ, ಹೀಯಾಳಿಕೆಯ ಮಾತುಗಳು ನನ್ನ ಮೇಲೆ ಯಾವ ಪರಿಣಾಮವನ್ನು ಬೀರುವುದಿಲ್ಲ. ನಾನು ಒಂದು ನಿರ್ಧಾರವನ್ನು ಉದ್ದೇಶದಲ್ಲಿಟ್ಟುಕೊಂಡು ಬಂದಿದೀನಿ."

ಏನದು? ಎಂದು ಅವನು ಕೇಳಲಿಲ್ಲ. ಇವನೇ ಮುಂದುವರಿಸಿದ.

"ಸಂಧ್ಯಳ ಭೇಟಿ ನನಗಾಗದ್ದು ತೀರ ಆಕಸ್ಮಿಕವಾಗಿ. ನಿಮಗೆ ಅದರ ಅಂದಾಜು ಸಹ ಇರಲಾರದು ಎಂದು ಆ ದಿನದ ಬಸ್ಸಿನ ಘಟನೆಯನ್ನು ತಿಳಿಸಿ,ಅವಳುಆ ಆಶ್ರಮಕ್ಕೆ ಬರುತ್ತಿದ್ದುದರ ಬಗ್ಗೆಯೂ ಹೇಳಿದ."

"ನಾನು ಈ ಕಟ್ಟು ಕತೇನೆಲ್ಲ ನಂಬ್ತೀನಿ ಅಂತ ಅಂದ್ಕೊಂಡ್ರಾ ? " ಭುಸುಗುಟ್ಟಿ ಪ್ರಶ್ನಿಸಿದ.

"ನೀವು ನಂಬುವುದಿಲ್ಲವೆಂದು ನನಗೆ ಗೊತ್ತು. ಯಾವ ಗಂಡ ಕೂಡಾ ನಂಬಲಾರ. ಅದಿರಲಿ, ನಾನು ಹೇಳುತ್ತಿರುವುದೆಲ್ಲ ಅಕ್ಷರಶಃ ನಿಜ. ನಾನು ಆಕೆ ಆಶ್ರಮಕ್ಕೆ ಹೋಗದಿರಲಿ ಎಂದು ತಿಳುವಳಿಕೆ ಹೇಳಿದೆ. ಮನಸ್ಸಿಗೆ ಭೂತ ಮೆಟ್ಟಿಕೊಂಡ ಆಕೆ ನನ್ನನ್ನೇ ಬಲವಂತ ಪಡಿಸಿದಳು. ಮಹಾಭಾರತದಲ್ಲಿ ಬರುವ ನಿಯೋಗದ ಪ್ರಸಂಗವನ್ನೇ ಉದಾಹರಣೆ ಯನ್ನಾಗಿ ಇಟ್ಟುಕೊಂಡು ನಿಮ್ಮ ಒಪ್ಪಿಗೆಯನ್ನು ಪಡೆಯುವುದಾಗಿ ಹೇಳಿ, ನನ್ನನ್ನು ಕೆಣಕಿ, ನನ್ನಿಂದ ತನ್ನ ಆಸೆಯನ್ನು ಪೂರೈಸಿಕೊಂಡಳು... ಅವಳು ಗರ್ಭವತಿಯಾಗಬೇಕಾಗಿತ್ತು. ಅದೇ ಅವಳ ಗುರಿಯಾಗಿತ್ತು. ಆ ಆಸೆಗಾಗಿ... ಒಂದು ಮಗುವಿಗಾಗಿ ನನ್ನನ್ನು ಒಪ್ಪಿಸಿದಳು." ನನ್ನ ಸಂಗವನ್ನು ಬಯಸಿದಳು

"ಈ ಮಾತುಗಳನ್ನು ನನಗೇ ಹೇಳುತ್ತಿದೀರಲ್ಲ, ನಾಚಿಕೆ ಆಗುಲ್ಲವೇ ನಿಮಗೆ ? "

"ನಾನು ಕೆಟ್ಟ ಮನುಷ್ಯನಲ್ಲ, ಲಂಪಟನಲ್ಲ. ನಿಮ್ಮ ಹೆಂಡತಿಯ ಇಚ್ಛೆ ಪೂರೈಸಲು ನಾನುಒಪ್ಪಲೇ ಬೇಕಾಯ್ತು. ನಾನು ಮಾಹಾಭಾರತದ ವ್ಯಾಸ ಮಹಾಮುನಿಯಂತೆ ಒಂದು ಒಳ್ಳೆಯ ಕೆಲಸವನ್ನೇ ಮಾಡಿದೆ ಎಂದೇ ಭಾವಿಸಿದ್ದೆ. ಆದರೆ ಎಷ್ಟೋ ದಿನಗಳ ಬಳಿಕ ಸಂಧ್ಯಾಮತ್ತೆ ನನ್ನ ಬಳಿಗೆ ಬಂದಳು. ನೀವು ಬರೆದಿದ್ದ ಪತ್ರವನ್ನು ನನಗೆ ತೋರಿಸಿದಳು. ನನ್ನ ಅತ್ತಿಗೆಯ ಸಲಹೆಯಂತೆ, ಒಬ್ಬ ಹೆಂಗಸು ಬೀದಿ ಪಾಲಾಗುವುದನ್ನು ತಪ್ಪಿಸಲು ನಾನು ಆಕೆಯನ್ನು ನನ್ನ ಮನೆಯಲ್ಲಿಟ್ಟುಕೊಂಡಿದೀನಿ. ಹುಟ್ಟುವ ಮೊದಲೇ ಅನಾಥವಾಗುವ ಮಗುವಿಗೆ ತಂದೆಯಸ್ಥಾನ ಕೊಡಲು ಸಹ ನಿರ್ಧರಿಸಿದೆ."

"ಆ ಮಗುವಿಗೆ ನಿಜವಾದ ತಂದೆ ನೀವೇ ತಾನೇ ? ಇನ್ನೇನು ? ನನಗೇನು ಹೇಳ್ತೀರಿ?"

"ಹೌದು, ಆದರೆ ಕಾನೂನಿನ ಪ್ರಕಾರ, ನೀವು ಆ ಮಗುವಿನ ತಂದೆ. ನನಗೆ ಯಾವ ಹಕ್ಕೂ ಇಲ್ಲ. "

"ನಾನಾಗಿಯೇ ನಾನು ಅವಳನ್ನು ಬಿಟ್ಟು ಬಂದಿರುವಾಗ ಇನ್ಯಾವ ಕಾನೂನು ? "

"ಆದರೆ ಡೈವೋರ್ಸ್ ಆಗಿಲ್ಲವಲ್ಲ. ಅಲ್ಲದೇ,ಸಂಧ್ಯಳಿಗೆ ಈಗ ತಾನು ಮಾಡಿದ್ದು ತಪ್ಪು ಎಂಬ ಅರಿವಾಗಿದೆ. ಅವಳೀಗಲೂ ನಿಮ್ಮ ಹೆಂಡತಿಯೇ... ಅವಳನ್ನು ಮತ್ತೆ ಸ್ವೀಕರಿಸಿ. ಇಲ್ಲದಿದ್ದರೆ ಏನು ಅನಾಹುತವಾಗುತ್ತೋ ...? ಅದನ್ನು ತಿಳಿಸಲೆಂದೇ ಬಂದೆ. " ಮೃದುವಾಗಿ ಹೇಳಿದ.

"ಏನು ಅನಾಹುತ ನಡೆದರೂ ಅದಕ್ಕೆ ನಾನು ಕಾರಣನಾಗುವುದಿಲ್ಲ. ನೀವುಗಳೇ

ಕಾರಣರಾಗುತ್ತೀರಿ. ನಿಮಗೆಷ್ಟು ಧೈರ್ಯ ಇಂತಹ ಮಾತುಗಳನ್ನಾಡಲು ! '' ಸಾಕುಮಾಡಿ.

''ಸಂಧ್ಯಾ ನಿಮ್ಮ ಹೆಂಡತಿ ಅಂತ ಅವಳ ಬಗ್ಗೆ ತಿಳಿಸುವುದು ನನ್ನ ಕರ್ತವ್ಯ ಅಂತ ಇಲ್ಲಿಗೆ ಬಂದೆ. ಅಲ್ಲದೇ ನೀವು ಟೂರ್ ಎಂದು ಹೊರಗೆ ಹೋಗುತ್ತಿದ್ದಾಗ, ನಿಮಗೆ ಯಾವ ಗೆಳತಿಯೂ ಇರಲಿಲ್ಲವೇ! ಒಂಟಿಯಾಗಿ ಸಂಧ್ಯಳನ್ನು ಅಲ್ಲಿ ಬಿಡುತ್ತಿದ್ದರೂ, ನಿಮಗೆ ಅನುಮಾನ ಬರಲಿಲ್ಲವೇ ? ನೀವು ಅವರನ್ನು ಪ್ರೀತಿಸುತ್ತಿರಲಿಲ್ಲವೇ?''

''ರೀ ಮಿಸ್ಟರ್. ಇವೆಲ್ಲ ನನ್ನ ಸ್ವಂತ ವಿಷಯ, ನಿಮಗೆ ಬೇಡ.''

''ಇರಲಿ, ಎಲ್ಲರಿಗೂ ಅವರವರ ವಿಷಯ ಅವರವರ ಸ್ವಂತದ್ದೇ... ಸಂಧ್ಯಾ ಕೂಡಾ ನಿಮ್ಮ ಸ್ವಂತದವಳು. ಅವಳು ಹೊರಗೆ ತಿರುಗುತ್ತಿದ್ದರೂ ನಿಮ್ಮ ಬಗ್ಗೆ ಎಂದೂ ಅನುಮಾನ ಪಟ್ಟಿರಲಿಲ್ಲ. ಹೊರಗೆ ನಿಮಗೆ ಗೆಳತಿಯರಿರಬಹುದು ಎಂಬ ಅನುಮಾನ ಕೂಡಾ ಆಕೆಗಿರಲಿಲ್ಲ. ಗೊತ್ತು ತಾನೆ ? ''

''ನಾನು ಗಂಡಸು.. ಏನು ಮಾಡಿದರೂ ನಡೆಯುತ್ತೆ ಸ್ವಾಮಿ .''

''ವಿದ್ಯಾವಂತರಾಗಿ ನೀವು ಆಡುವ ಮಾತೇ ಇದು ? ಒಬ್ಬ ಹೆಂಗಸು ಮಾಡಿದರೆ ತಪ್ಪು ಎನಿಸುವ ವಿಷಯ ಗಂಡು ಮಾಡಿದರೆ , ಅದೇ ತಪ್ಪೇಕೆ ಆಗುವುದಿಲ್ಲ? ನೀವು ಊರಿನಲ್ಲಿಲ್ಲದಾಗ ತನ್ನ ಒಂಟಿತನವನ್ನು ಅದೂ ಕೇವಲ ಒಂದು ಮಗುವಿನ ಆಸೆಗೆ ಆಶ್ರಮ. ಅಲ್ಲಿ ಇಲ್ಲಿ ಎಂದು ತಿರುಗುತ್ತಿದ್ದಳು, ಅದೂ ಕೇವಲ ಒಂದು ಮಗುವಿನ ಆಸೆಗೆ. ಒಂದೇ ಒಂದು ಮಗುವಾಗಿದ್ದರೂ, ಅವಳು ಒಂಟಿಯಾಗಿರುತ್ತಿರಲಿಲ್ಲ. ಈ ಹೆಜ್ಜೆಯನ್ನು ತುಳಿಯುತ್ತಿರಲಿಲ್ಲ.

''ಈಗ ಅವಳ ಒಂಟಿತನವೆಲ್ಲಾ ಕಳೆದು, ಬೇಸರವೆಲ್ಲ ಕಳೆದಿದೆಯಲ್ಲ.''

''ಇಲ್ಲ, ಈಗ ಅವಳಲ್ಲಿಅಪರಾಧೀ ಮನೋಭಾವ ಹೆಚ್ಚಾಗಿದೆ. ತಾನು ಮಾಡಿದ್ದು ತಪ್ಪು ಅಂತ ಅನ್ನಿಸುತ್ತಿರಬಹುದು. ತನ್ನ ಗಂಡ ಒಪ್ಪಿದ್ರೆ.. ಎನ್ನುವುದೇ ಅವಳ ಚಿಂತೆ. ''

''ಅದ್ಹೇಗ್ರೀ ಒಪ್ಪುಕ್ಕಾಗುತ್ತೆ! ನನ್ನದಲ್ಲದ ಮಗುವನ್ನು ನಾನು ಹೇಗೆ ನನ್ನ ಮಗುವೆಂದು ಒಪ್ಪಿಕೊಳ್ಳಲಿ ? ನೀವೇ ನನ್ನ ಜಾಗದಲ್ಲಿ ಇದ್ದಿದ್ದರೆ ಏನು ಮಾಡ್ತಿದ್ರಿ ?''

''ಆದರೆ... ನೀವು ಈಗ, ನಿಮ್ಮ ಹೆಂಡತಿಯದಲ್ಲದ, ನಿಮ್ಮದಲ್ಲದ ಒಂದು ಮಗುವಿಗೆ ತಂದೆಯಾಗಿರಲು ಸಿದ್ಧ' ಅವನ ಪ್ರಶ್ನೆಗೆ ಉತ್ತರಿಸದೆ ಮಾತಿನ ಧಾಟಿಯನ್ನು ಬದಲಾಯಿಸಿದ್ದ.

ಅವನಿನ್ನು ಮಾತನ್ನು ಪೂರೈಸಿರಲಿಲ್ಲ, ಅವನು ಕೆಂಪಾದ..ಹೆದರಿದ್ದವನಂತೆ ತೋರಿದ ''ನಿಮಗೆ ಈ ವಿಷಯ ಹೇಗೆ ತಿಳಿಯಿತು ?'' ಗಡಬಡಿಸಿ ಕೇಳಿದ.

ತಕ್ಷಣ ದಿನೇಶ ಎಚ್ಚರಗೊಂಡ. ಏನೋ ಒಳಗುಟ್ಟು ಇದೆ. ತಾನು ಹೇಳಲು ಹೊರಟಿದ್ದ ಮಾತೇ ಬೇರೆ.... ''ಸಂಧ್ಯಾ ಈಗ ನಿಮ್ಮ ಹೆಂಡತಿಯಲ್ಲ, ಮಗು ನಿಮ್ಮವಲ್ಲ ಅಂತ ಬರೆದುಕೊಡಿ ಅಂತ ಹೇಳುವವನಿದ್ದ. ಆದರೆ ಅಷ್ಟರಲ್ಲಿ ಅವನು ಉದ್ವೇಗಗೊಂಡಿದ್ದ.

ಮಾತು ಹೊರಬಿದ್ದಿತ್ತು. ರಹಸ್ಯವನ್ನು ಅರಿಯ ಬೇಕಾಗಿತ್ತು. ತಕ್ಷಣ ಮಾತಿನ ದಿಕ್ಕನ್ನು ಬದಲಿಸಿದ. ''

''ಹೋಗಲಿ ಬಿಡಿ. ಹೊರಗೆ ತಿರುಗುವ ಗಂಡಸು ನಿಮ್ಮಿಂದ ತಪ್ಪು ನಡೆದಿದೆ. ಆದರೆ ಅದನ್ನು ಸರಿಪಡಿಸುವುದು ನಿಮ್ಮ ಕರ್ತವ್ಯವಲ್ಲವೆ!''

ಅವನ ಸ್ವಲ್ಪ ಮೆತ್ತಗಾದಂತೆ ಕಂಡಿತು.

''ದಯವಿಟ್ಟು ಈ ವಿಷಯಗಳನ್ನು ಅವಳಿಗೆ ತಿಳಿಸಬೇಡಿ'' ಕೇಳಿಕೊಂಡ.

''ಏಕೆ! ಏಕೆ ತಿಳಿಸಬಾರದು ? ಅವಳು ನಿಮಗೆ ಎಲ್ಲವನ್ನು ತಿಳಿಸಲು ತಯಾರಿದ್ದಳಲ್ಲ.... ನೀವು ಹೀಗೆ ಮಾಡಬಹುದಾ ? ಹೋಗಲಿ ನೀವೇ ತಿಳಿಸಿಬಿಡಿ.'' ಸಲಹೆ ನೀಡಿದ.

''ಹಾಗಲ್ಲ, ಹಾಗಲ್ಲ'' ತೊದಲಿದ. ಮುಖದ ಕಳೆ ಕೆಟ್ಟದಾಗಿತ್ತು.

''ಹಾಗಾದರೆ ಅದೇನದು ಹೇಳಿ'' ನೆಟ್ಟಗೆ ಕೂತ.

''ನನ್ನ ಮದುವೆಯಾಗಿ ಏಳು ವರ್ಷಗಳು ಕಳೆದರೂ ನಮಗೆ ಮಕ್ಕಳಾಗಲಿಲ್ಲ. ದಿನ ಕಳೆದಂತೆ ಸಂಧ್ಯಳಿಗೆ ನನ್ನ ಮೇಲೆ ಉದಾಸೀನತೆ ಹೆಚ್ಚಾಯಿತು ಎನ್ನುವ ಭಾವನೆ ಕಂಡು ಬಂತು. ನಾನು ಡಾಕ್ಟರ ಬಳಿಗೆ ಹೋಗಿ ಪರೀಕ್ಷೆ ಮಾಡಿಸಿಕೊಂಡೆ. ನನ್ನ ಊಹೆ ನಿಜವಾಗಿತ್ತು. ಈ ಜನ್ಮದಲ್ಲಿ ನಾನು ತಂದೆಯಾಗುವುದು ಸಾಧ್ಯವಿರಲಿಲ್ಲ. ಒಂದು ಮಗುವನ್ನು ದತ್ತು ತೆಗೆದುಕೊಳ್ಳುವ ಆಲೋಚನೆ ಮಾಡಿದೆ. ಆದರೆ ಸಂಧ್ಯಾ ಆ ಸಲಹೆಯನ್ನು ಒಪ್ಪಲಿಲ್ಲ. ನನಗೆ ತನ್ನದೇ ಆದ ಸ್ವಂತ ಮಗು ಬೇಕೆಂದು ಬಲವಂತ ಪಡಿಸಿದಳು. ನಾನು ನನ್ನ ಸ್ಥಿತಿಯನ್ನು ಹೇಲಾರದೇ ಮುಚ್ಚಿಟ್ಟೆ. ಒಬ್ಬ ಗಂಡಸಿಗೆ ಇದಕ್ಕಿಂತ ಹೆಚ್ಚಿನ ಅಮಮಾನ ವೇನಿದೆ? ಆದರೆ ಮನೆಯಲ್ಲಿ ಆಗಾಗ ಜಗಳವಾಗುತ್ತಿತ್ತು. ನಾನು ಟೂರ್ ಎಂದು ಹೆಚ್ಚಿಗೆ ಊರಿನಿಂದ ಮನೆಯಿಂದ ಹೊರಗೇ ತಿರುಗುತ್ತಿದ್ದೆ. ಆದರೆ ಅವಳಿಗೆ ನನ್ನ ಬಗ್ಗೆ ಖಂಡಿತಾ ಅನುಮಾನ ಬಂದಿರಲಿಲ್ಲ. ಅವಳು ಮಗುವಿಗಾಗಿ ಹಂಬಲಿಸಿ ವ್ರತ, ಕತೆ, ಯಾರು ಏನೇ ಹೇಳಲಿ ಅದನ್ನು ಮಾಡುತ್ತಿದುದು ಹುಚ್ಚುತನವೆಂದೆನಿಸಿತ್ತು. ಆದರೆ ಅವಳಿಗೆ ಏನೂ ಹೇಳಲಾರದವನಾಗಿದ್ದೆ. ಒಂದಲ್ಲ ಒಂದು ದಿನ ಸುಮ್ಮನಾಗುವಳೆಂದು ಭಾವಿಸಿದ್ದೆ.

ಈ ಸಮಯದಲ್ಲಿ ನಾನು ಒಂದು ದಿನ ಹೈದರಾಬಾದಿಗೆ ಪ್ರಯಾಣ ಹೊರಟಿದ್ದೆ. ಫಸ್ಟ್‌ಕ್ಲಾಸ್ ಕಂಪಾರ್ಟ್‌ಮೆಂಟಿನಲ್ಲಿ ನನ್ನ ಜತೆ ಒಂದೆರಡು ವರ್ಷದ ಒಂದು ಮಗೂ ಸಹ ಇತ್ತು. ಇನೊಬ್ಬ ಸಹ ಪ್ರಯಣಿಕ ಹೆದರಿ, ಅಲ್ಲಿಯೇ ಇಳಿದು ಹೊರಟು ಹೋಗಿದ್ದ. ಅವಳು ದಿಕ್ಕು ತೋಚದೇ ಅಳುತ್ತಿದ್ದಳು. ನನಗೂ ತುಂಬಾ ವ್ಯಥೆಯಾಗಿತ್ತು. ಅಸಹಾಯಕ ಸ್ಥಿತಿಯಲ್ಲಿದ್ದ ಅವಳಿಗೆ ನಾನು ಸಹಾಯ ಮಾಡಬೇಕಾಗಿ ಬಂತು. ಅವಳು ಅವಳ ಗಂಡನ ಮನೆಗಾಗಲೀ, ತವರು ಮನೆಗಾಗಲೀ ಹೋಗುವಂತಿದ್ದರೆ ಅವರುಗಳಿಗೆ ತಿಳಿಸಿ, ಕಳಿಸುವ ಏರ್ಪಾಟು ಮಾಡುತ್ತಿದ್ದೆ. ಆದರೆ ಅವಳು ಅದನ್ನು ಒಪ್ಪಲಿಲ್ಲ. ಬಲವಂತ ಪಡಿಸಿದ ಮೇಲೆ ತನ್ನ ಕತೆಯನ್ನು ಹೇಳಿದಳು.

ಅವಳು ಇದ್ದದ್ದು ಬಾಂಬೆಯ ಒಂದು ಸಣ್ಣ ಫ್ಲಾಟಿನಲ್ಲಿ. ಅವಳದು ಲವ್ ಮ್ಯಾರೇಜ್. ಇಬ್ಬರೂ ತಂದೆ ತಾಯಿಗಳ ವಿರುದ್ಧ ನಿಂತು ಮದುವೆಯಾಗಿದ್ದರು. ಆದರೆ ಅವರುಗಳು ಅದನ್ನು ಗುಟ್ಟಾಗಿಟ್ಟಿದ್ದರು. ಈ ಮಧ್ಯೆ ಅವನು ಬಾಂಬೆಗೆ ಕೆಲಸ ಹುಡುಕಿಕೊಂಡು ಹೋಗಿ, ಯಾವುದೋ ಕಳ್ಳತನದ ಅಪಾದನೆಯ ಮೇಲೆ ಜೈಲು ಸೇರಿ ಎಷ್ಟೋ ದಿನಗಳ ನಂತರ ವಾಪಸ್ಸು ಊರಿಗೆ ಬರುವ ಹೊತ್ತಿಗೆ, ಅವಳಿಗೆ ಒಬ್ಬ ಮಿಲಟರಿ ಆಫೀಸರನೊಂದಿಗೆ ಮದುವೆಯಾಗಿತ್ತು. ಲವಲವಿಕೆಯಿಂದಿದ್ದು ತನ್ನ ಗುಟ್ಟನ್ನು ಹೊರಗೆಡವದ ಅವಳಿಗೆ ಒಬ್ಬ ಒಳ್ಳೆಯ ವರ ಸಿಕ್ಕಿದ್ದ.

ಮದುವೆಯಾಗಿ ಅವಳು ಹೋದ ಕೆಲವು ದಿನಗಳ ನಂತರ ಅವಳ ಪ್ರೇಮಿ ಊರಿಗೆ ಬಂದವನು ಅವಳ ಚಿಂತೆಯಲ್ಲೇ ಕಾಲ ಕಳೆಯುತ್ತಿದ್ದ. ಅದೇ ಸಮಯದಲ್ಲಿ ಅವಳು ಬಾಣಂತನಕ್ಕಾಗಿ ತವರು ಮನೆಗೆ ಬಂದಳು. ಆಗ ಮತ್ತೆ ಅವನ ಭೇಟಿಯಾಯಿತು. ಅವನ ಪ್ರೀತಿ ಅವಳನ್ನು ಕರೆಯಿತು. ಅವರು ತಮ್ಮಿಬ್ಬರ ಪ್ರೇಮವನ್ನು ಗುಟ್ಟಾಗಿ ಮುಂದುವರೆಸಿದರು.

ನಂತರ ಹೆರಿಗೆಯಾದ ಮೇಲೆ ಹದಿನೈದು ದಿನಗಳ ಮಗುವನ್ನು ಬಿಟ್ಟು ಅವನೊಡನೆ ಮತ್ತೆ ಬಾಂಬೆಗೆ ಬಂದು ಸೇರಿದ್ದಳಂತೆ.

ದಿನೇಶನ ಹಣೆಯ ಮೇಲೆ ಬೆವರು ಸಾಲುಗಳು ಮೂಡಿದವು. ಅವನು ತನಗೇ ತನ್ನ ಕತೆಯನ್ನು ಹೇಳುತ್ತಿದಾನೇನೋ ಅಂತ ಎನಿಸಿತ್ತು. ಅವಳ ಹೆಸರು ಏನೆಂದು ಕೇಳುವ ತವಕವಾದರೂ ತಡೆದುಕೊಂಡ. ಒಂದು ವೇಳೆ ಹೆಸರು ಪರಿಚಯದ್ದೇ ಆದರೆ ಎಂಬ ಭಯ! ಆದರೂ ಕೇಳಿದ. "ಅವಳು ಮಾಡಿದ್ದು ಸರಿ ಎನಿಸುತ್ತಾ ನಿಮಗೆ?" ಪ್ರಶ್ನಿಸಿದ.

"ಯಾವುದೂ ಸರಿಯಲ್ಲ. ಅವಳು ತಂದೆ ತಾಯಿಗೆ ತಿಳಿಸದೇ ಯಾವನನ್ನೋ ಪ್ರೀತಿಸಿ ಮದುವೆಯಾದದ್ದು ಮೊದಲ ತಪ್ಪು. ನಂತರ ಅದನ್ನ ಮುಚ್ಚಿಟ್ಟು ಮರು ಮದುವೆಯಾದದ್ದು ಶುದ್ಧ ತಪ್ಪು. ಅನಂತರ ಹುಟ್ಟಿದ ಮಗುವಿನ ಬಗ್ಗೆ ಕಿಂಚಿತ್ತೂ ಮಮಕಾರ ವಿಲ್ಲದೇ, ಕೈ ಹಿಡಿದವನಿಗೆ ದ್ರೋಹ ಮಾಡಿ ಹೋದದ್ದು ಸರ್ವಥಾ ನ್ಯಾಯವಲ್ಲ. ಎಲ್ಲಾ ತಪ್ಪುಗಳ ಸರಮಾನೆ... ಮೋಸಗಳ ಬಲೆ."

"ಮತ್ತೇಕೆ ಅವಳಿಗೆ ಸಹಾಯ ಮಾಡಿದಿರಿ! ಎಲ್ಲಾ ತಿಳಿದ ಮೇಲೂ .."

"ಏಕೆ ಅಂದರೆ.. ಆಕೆ ಒಬ್ಬ ಹೆಂಗಸು. ನಿಸ್ಸಹಾಯಕ ಪರಿಸ್ಥಿತಿಯಲ್ಲಿ ಗಂಡನನ್ನು ಕಳೆದುಕೊಂಡು ದುಃಖಿಸುತ್ತಿರುವ ಆಕೆಗೆ ಸಹಾಯ ಮಾಡಬೇಕೆಂಬ ಅಂತಃಪ್ರೇರಣೆ ಉಂಟಾಯಿತು. ಅಂತಹ ಪ್ರೇರಣೆ ಸಾಮಾನ್ಯವಾಗಿ ಎಲ್ಲರಿಗೂ ಉಂಟಾಗುತ್ತದೆ. ಅಲ್ಲವೇ! ನಾನು ಮಾನವೀತೆಯ ದೃಷ್ಟಿಯಿಂದ ಸಹಾಯ ಮಾಡಿದೆ. ಅದು ತಪ್ಪಲ್ಲವಲ್ಲ."

ದಿನೇಶ ನಕ್ಕ. "ತಾನು ಮಾಡಿದ್ದೂ ಅದನ್ನೇ ಅಲ್ಲವೇ! ಆದರೆ ಅದನ್ನು ತಪ್ಪು ಎಂದು ಈತ ಹೇಳುತ್ತಿದ್ದಾನೆ. ಆಮೇಲೇನಾಯ್ತು ಎಂದು ಇವನು ಕೇಳಲಿಲ್ಲ. ಅವನೇ ಮುಂದುವರಿಸಿದ....."

ಅವರು ಹೈದ್ರಾಬಾದಿಗೆ ಯಾತಕ್ಕೆ ಬಂದಿದ್ದರೋ, ಎಲ್ಲಿಂದ ಬಂದಿದ್ದರೋ ನನಗೆ ತಿಳಿಯಲಿಲ್ಲ. ನಾನು ಅವಳನ್ನು, ಮಗುವನ್ನೂ ಬಾಂಬೆಯ ಅವಳ ಪ್ಲಾಟಿಗೆ ಕ್ಷೇಮವಾಗಿ ತಲುಪಿಸುವ ಭಾರವನ್ನು ಹೊತ್ತೆ. ಏಕೆಂದರೆ ಅವಳು ನಮ್ಮ ಕರ್ನಾಟಕದ ಹುಡುಗಿ ಯಾಗಿದ್ದಳು.

ಆಮೇಲೆ ನಾನು ಆಗ ಈಗ ಬೊಂಬಾಯಿಗೆ ಹೋದಾಗಲೆಲ್ಲಾ ಅವಳನ್ನು ಭೇಟಿಯಾಗುತ್ತಿದ್ದುದು ನಿಜ. ಆದರೆ ನಮ್ಮಿಬ್ಬರಲ್ಲಿ ಯಾವ ಸಂಬಂಧವೂ ಇರಲಿಲ್ಲ. ಅವಳ ಗಂಡ ಕೆಲಸದಲ್ಲಿದ್ದ ಕಂಪೆನಿಯಿಂದ ಸ್ವಲ್ಪ ಹಣ ಬಂದಿತ್ತು. ಅದು ಅವಳ ಖರ್ಚಿಗೇ ಸಾಲದು. ನಾನು ಆ ಮಗುವಿನ ಯೋಗಕ್ಷೇಮದ ಭಾರವನ್ನು ತೆಗೆದುಕೊಳ್ಳಬೇಕೆಂಬ ಆಸೆಯಿಂದ, ಈ ವಿಷಯವನ್ನು ಸಂಧ್ಯಳೊಡನೆ ಪ್ರಸ್ತಾಪಿಸಿದೆ.

ಅವಳು ಸುತಾರಂ ಒಪ್ಪಲಿಲ್ಲ. ಅವಳಿಗೂ ನಿಮಗೂ ಏನು ಸಂಬಂಧ ? ಎಂದು ನನ್ನನ್ನೇ ಹೀಯಾಳಿಸಿದಳು. ಆದರೂ ನಾನು ಆಗೀಗ ಆ ಮಗುವಿನ ಖರ್ಚಿಗೆ ಅಂತ ಒಂದಿಷ್ಟು ಹಣ ಕಳಿಸಿದೆ. ಎಂದಾದರೂ ಸಂಧ್ಯಾಳನ್ನು ಒಪ್ಪಿಸಿ, ಆ ಮಗುವನ್ನು ದತ್ತು ತೆಗೆದುಕೊಳ್ಳುತ್ತೇನೆಂಬ ನಂಬಿಕೆ ನನ್ನಲ್ಲಿತ್ತು. ಆದರೆ ನಾನು ಸಂಧ್ಯಾಳನ್ನು ಒಪ್ಪಿಸಲಾಗಲಿಲ್ಲ. ಇದೇ ಸಮಯದಲ್ಲಿ ಒಂದು ದಿನ, ಸಂಧ್ಯಳಲ್ಲಿ ಆದ ಬದಲಾವಣೆ ನನಗೆ ತಿಳಿಯಿತು. ನೇರವಾಗಿ ಅವಳನ್ನೇ ಕೇಳುವ ಧೈರ್ಯವಿಲ್ಲದೇ, ಅವಳು ಹೋಗಿದ್ದ ಆಸ್ಪತ್ರೆಗೆ ಹೋಗಿ ವಿಚಾರಿಸಿದಾಗ ನಿಜಾಂಶ ತಿಳಿಯಿತು. ಅವಳು ಎರಡು ತಿಂಗಳ ಗರ್ಭಿಣಿಯಾಗಿದ್ದಳು. ಮಗು ನನ್ನದಲ್ಲವೆಂದು ನನಗೆ ಖಚಿತವಾಗಿ ತಿಳಿದಿತ್ತು.

ಅಕ್ಕ ಪಕ್ಕದವರಿಗೆ ತಿಳಿಯುವಂತೆ ಗಲಾಟೆ ಮಾಡಿ, ನನ್ನ ಮಾನವನ್ನು ನಾನೇ ಕಳೆದುಕೊಳ್ಳುವ ಇಚ್ಛೆ ನನಗಿರಲಿಲ್ಲ. ಹಗಲೂ ರಾತ್ರಿ ಯೋಚಿಸಿ ಒಂದು ತೀರ್ಮಾನಕ್ಕೆ ಬಂದೆ. "ನನ್ನ ಮಾತಿಗೆ ಬೆಲೆ ಕೊಡದೆ, ಅವಳು ನನಗೆ ದ್ರೋಹ ಮಾಡಿದಾಳೆ, ಅವಳ ಪಾಡಿಗೆ ಅವಳನ್ನು ಬಿಟ್ಟು ಬಿಡುವುದೇ ಒಳ್ಳೆಯದೆಂದು ಅನ್ನಿಸಿತು. ಈ ಮುಂಚೆಯೇ ನನ್ನ ಸ್ಥಿತಿಯನ್ನರಿತು ಅವಳಿಗೆ ಡೈವೋರ್ಸ್ ಕೊಟ್ಟಿದ್ದರೆ ಚೆನ್ನಾಗಿತ್ತು. ಆದರೆ ಈಗ ಈ ವಿಷಯವನ್ನು ಬಹಿರಂಗ ಪಡಿಸಿ, ನನ್ನ ದುರ್ಬಲತೆಯನ್ನು ತಿಳಿಸಿಕೊಡುವ ಬದಲು, ಸಂಧ್ಯ ಮೇಲಿನ ಸಿಟ್ಟನ್ನೇ ಆಧಾರವನ್ನಾಗಿಟ್ಟುಕೊಂಡು, ನಾನೊಬ್ಬ ದಯಾಮಯನಂತೆ ಅವಳನ್ನು ಬಿಟ್ಟು ಬಾಂಬೆಗೆ ಹೋದೆ."

ಅಲ್ಲಿ ನಮ್ಮ ಹೆಡ್ ಆಫೀಸಿನಲ್ಲಿ ಅವರಿವರನ್ನು ಬೇಡಿ, ಬೆಂಗಳೂರಿನಿಂದ ವರ್ಗ ಮಾಡಿಸಿಕೊಂಡು ಇಲ್ಲಿಗೆ ಬಂದೆ. ಸದ್ಯದಲ್ಲೇ ಅವರಿಬ್ಬರನ್ನು ಇಲ್ಲಿಗೆ ಕರೆದುಕೊಂಡು ಬರುತ್ತೇನೆ. ಆ ಮಗುವಿಗೆ ಪೋಷಕನಾಗುತ್ತೇನೆ. ಅವಳಿಗೆ ಆಸರೆಯಾಗುತ್ತೇನೆ....ಆದರೆ ಅವಳಿಂದ ಇನ್ನೂ ಸಮ್ಮತಿ ಸಿಕ್ಕಿಲ್ಲ. ಆದರೆ ನಾನು ಅವಳಿಗಾಗಿ ಕಾಯುತ್ತೇನೆ.

ಅವನ ನಿರ್ಧಾರ ಇವನನ್ನು ತಲ್ಲಣಗೊಳಿಸಿತ್ತು. ಸಂಧ್ಯಳನ್ನು ಮತ್ತೆ ಸ್ವೀಕರಿಸುವುದಿಲ್ಲ ವೆಂದು ಖಚಿತವಾಗಿತ್ತು ಎಂದು ಅರ್ಥವಾಗಿತ್ತು.

"ದಾರಿ ತಪ್ಪಿದ ಒಬ್ಬ ಹೆಂಗಸನ್ನು ಉದ್ಧಾರ ಮಾಡುತ್ತೇನೆಂಬ ಒಂದು ರೀತಿಯ ಹೆಮ್ಮೆ ನನಗಿದೆ. ಅವಳಿಗೆ ಒಬ್ಬ ಗಂಡಸಿನ ಅವಶ್ಯಕತೆ ಇದೆ. "

ಆದರೆ .... ಸಂಧ್ಯ ಅವಳು ದಾರಿತಪ್ಪಲು ನೀವೇ ಕಾರಣ ತಾನೆ ?

"ಹೌದು, ಅವಳೂ ಸಹ ದಾರಿ ತಪ್ಪಿದವಳೇ... ಆದರೆ ಅವಳನ್ನು ಉದ್ಧಾರ ಮಾಡಲು ನಿಮ್ಮಂತಹವರು ಸಿಕ್ಕಿದೀರಲ್ಲ." ವ್ಯಂಗ್ಯದ ಛಾಯೆಯನ್ನು ಗಮನಿಸಿದ.

"ನಿಮ್ಮ ಮಾತನ್ನು ನಾನು ಹೇಗೆ ನಂಬಲಿ ? ಅಂತಹ ಒಬ್ಬಳು ಹೆಂಗಸು ಇದಾಳೆ ಎಂದು ಹೇಗೆ ತಿಳಿಯಲಿ ? ಸಾಕ್ಷಿ ಏನಿದೆ "

"ಚೆನ್ನಾಗಿದೆ ನಿಮ್ಮ ಮಾತು ಸಂಧ್ಯಳಿಗಿಂತ ಇನ್ನು ಉದಾಹರಣೆ ಬೇಕಾ? ನನಗೆ ಗೌರವ ಕೊಡದೆ ಬೇರೊಬ್ಬನ ಸಹವಾಸ ಮಾಡಿಲ್ಲವೇ ? ಇವಳಂತೆಯೇ ಅವಳೂ ಕೂಡಾ..."

"ಆದರೆ ಸಂಧ್ಯಾ ಅಪವಿತ್ರ ಎಂದು ಹೇಗೆ ಹೇಳ್ತೀರಿ ! ಮಗುವಿಗಾಗಿ...."

"ಒಂದು ಮಾತು, ಅವಳು ನಿಮ್ಮಿಬ್ಬರ ಸ್ನೇಹದ ಬಗ್ಗೆ ನನಗೆ ತಿಳಿಸಿ, ನನ್ನಿಂದ ಬಿಡುಗಡೆಯನ್ನು ಕೇಳಿದ್ದರೆ... ಆಗಿನ ಮಾತೇ ಬೇರೆಯಾಗುತ್ತಿತ್ತು. ನಾನುಈ ಅಲಕಾ ರಂಜನ್ ಬಗ್ಗೆ ಎಲ್ಲವನ್ನೂ ತಿಳಿಸಿ ಇವಳ ಒಪ್ಪಿಗೆಯನ್ನು ಕೇಳುತ್ತಿದ್ದೆ..."

ದಿನೇಶ ಧಿಗ್ಗನೆ ಎದ್ದು ನಿಂತ. ನಖಶಿಖಾಂತ ನಡುಗುವಂತಾಗಿತ್ತು. ಹೊಟ್ಟೆ ಕಲಕಿದಂತಾಗಿತ್ತು. ಅಲಕಾ ರಂಜನ್... ಬಾಂಬೆಯ ಕ್ಲಬ್ಬಿನ ಡ್ಯಾನ್ಸರ್ ಅಲಕಾ ರಂಜನ್.... ಅವಳೇ ಅವಳೇ... ನನ್ನ ಹೆಂಡತಿಯಾಗಿದ್ದವಳು. ನನ್ನ ಮಗುವಿಗೆತಾಯಿಯಾಗಿದ್ದವಳು... ಅವನ ತಲೆ ಸುತ್ತಿ ಬವಳಿ ಬಂದಂತಾಯಿತು. ಕುರ್ಚಿಯನ್ನು ಹಿಡಿಯಲು ಬಾಗಿ ಕೆಳಗೆ ಬಿದ್ದುಬಿಟ್ಟ...

"ಏನಾಯ್ತು, ಏನಾಯ್ತು" ಎಂದು ಗಾಬರಿಯಿಂದ ರಘುನಾಥ ಅವನನ್ನು ಹಿಡಿದು ಕೂರಿಸಿದ. ನೀರನ್ನು ಕುಡಿಯಲೆಂದು ಲೋಟವನ್ನು ತಂದು ತುಟಿಯ ಬಳಿಗೆ ಹಿಡಿದ. ದಿನೇಶ ಏನಿಲ್ಲ, ಏನಿಲ್ಲ ಎಂದು ಎದ್ದು ಕೂರುತ್ತಾ ಲೋಟವನ್ನು ಕೈಗೆತ್ತಿಕೊಂಡ.

ಇಲ್ಲಿಯ ಬಿಸಿಲು, ಶೆಖೆ ಅಸಾಧ್ಯ ಬೆಂಗಳೂರಿನಂತಹ ತಂಪು ಹವೆ ಅಲ್ಲ. ಅವನು ಲೋಟ ನೀರನ್ನು ಗಟಗಟನೆ ಕುಡಿದ. ಹೂಜಿಯ ನೀರು ತಂಪಾಗಿದ್ದರೂ, ಒಳಗಿನ ಬೆಂಕಿಯನ್ನು ಆರಿಸಲು ಅಶಕ್ಯವಾಯಿತು.

"ಡಾಕ್ಟರನ್ನ ಕರೆಸಲೇ ?" ಕೇಳಿದ.

"ಬೇಡ ಪರವಾಗಿಲ್ಲ. ಸ್ವಲ್ಪ ರೆಸ್ಟ್ ತಗೊಂಡರೆ ಸರಿ ಹೋಗುತ್ತೆ" ಎಂದ.

"ಹಾಗಿದ್ದರೆ ನಾನು ಬರ್ತೀನಿ ನನ್ನಿಂದ ತೊಂದರೆಯಾಗಿರಬಹುದು" ಎಂದು ಕೈ ಜೋಡಿಸಿ, ಹೊರಟ ರಘುನಾಥ. ಎಲ್ಲವೂ ಖಾಲಿಯಾಗಿದೆಯೆನಿಸಿತ್ತು.

ಎಷ್ಟೋ ಹೊತ್ತಿನ ನಂತರ ದಿನೇಶ, ರೂಮನ್ನು ಖಾಲಿ ಮಾಡಿ ಬೆಂಗಳೂರಿಗೆ ವಾಪಸ್ಸು ಹೊರಟ. ಮನಸ್ಸು ಕಲಕಿ ಹೋಗಿತ್ತು. ಗೊಂದಲದ ಗೂಡಾಗಿತ್ತು.

ಮಾರನೆಯ ದಿನ ಊರನ್ನು ತಲುಪಿದ. ಮನೆಗೆ ಬಂದಾಗ ಬಾಗಿಲು ತೆಗೆದ ಅಣ್ಣ ಅವನನ್ನು ನಗುಮುಖದಿಂದ ಸ್ವಾಗತಿಸಿ "ಕಂಗ್ರಾಟ್ಸ್" ಎಂದ. ಇವನು ಬೆರಗಾಗಿ ಬಾಯಿಬಿಟ್ಟ. ಸುದ್ದಿ ಏನಿರಬಹುದು ಎಂದು ಊಹಿಸಿದ. ಆದರೂ ಭಾವರಹಿತನಂತೆ ನಿಂತ.

"ನಿನ್ನ ಹೆಂಡತಿಗೆ ಗಂಡು ಮಗುವಾಗಿದೆ" ಕೈ ಕುಲುಕಿ ಅಭಿನಂದಿಸಿದ.

ಒಂದು ಗಳಿಗೆ ಸಂತೋಷವೆನಿಸಿದರೂ, ಮರುಗಳಿಗೆ ಮುಖ ಕೆಟ್ಟಿತು. ಚಿಂತೆ ಹೆಚ್ಚಿತು.

ಈ ಮಗು ಹುಟ್ಟಿದ ಕೂಡಲೇ ಸಂಧ್ಯಳನ್ನು ಮತ್ತೆ ಗಂಡನ ಮನೆಗೆ ಕಳಿಸುವ ತೀರ್ಮಾನ ತಗೊಂಡಿದ್ದ. ಆದರೆ... ಈಗ ? ತೀರ್ಮಾನ ಬದಲಾಗಿತ್ತು. ಅಚ್ಚರಿಯಿಂದ ಸಮಾಧಾನಗೊಂಡು, ಉತ್ಸಾಹವನ್ನು ತೋರದೆ ಆಸ್ಪತ್ರೆಗೆ ಹೋಗದಿದ್ದವನನ್ನು ಅಣ್ಣ ಕೇಳಿದ.

"ಯಾಕೋ ? ನಿನ್ನ ಹೆಂಡತೀನ , ಮಗುವನ್ನು ನೋಡುವುದಿಲ್ಲವೇನೋ?"

"ಆಮೇಲೆ ಹೋಗ್ತೀನಿ. ನಿಧಾನವಾಗಿ ಎಂದ ನಿರುತ್ಸಾಹದಿಂದ. ಗೊಂದಲದ ಗೋಜಲಿನ ಗೂಡು ಅವನ ಮನಸ್ಸು ಎಂದು ಅಣ್ಣನಿಗೇನು ಗೊತ್ತು ?"

"ಮಧ್ಯಾಹ್ನ ಊಟದ ಸಮಯದಲ್ಲಿ ಮನೆಗೆ ಬಂದ ಅತ್ತಿಗೆ ಗೀತ, ಅವನನ್ನೇ ದೂಷಿಸಿದಳು."

"ದಿನ ತುಂಬಿರುವ ಅವಳನ್ನು ಬಿಟ್ಟು ಎಲ್ಲಿಗೆ ಹೋಗಿದ್ದೆ ನೀನು ....? ಗಂಡನಾದವನು ಹೀಗೆ ಮಾಡ್ಬಹುದಾ ?"

"ನನಗೇನು ಗೊತ್ತು . ಅವಳಿಗೆ ಇಪತ್ತೇ ಹೆರಿಗೆ ಆಗುತ್ತೆ ಅಂತ. ಅದು ಸರಿ, ಅವಳು ಹೇಗಿದಾಳೆ?" ಕರ್ತವ್ಯವೆಂಬಂತೆ ಪ್ರಶ್ನಿಸಿದ.

"ಮಗು ಮುದ್ದಾಗಿ ಚೆನ್ನಾಗಿದೆ. ಆದರೆ ಅವಳು ಮಾತ್ರ ಮಂಕಾಗಿದಾಳೆ. ಯಾಕೋ ತುಂಬಾ ಅತ್ತಳು. ಕೇಳಿದರೆ ಹೇಳಲಿಲ್ಲ. ಡಾಕ್ಟರು ನಿದ್ದೆ ಬರುವ ಇಂಜೆಕ್ಷನ್ ಕೊಟ್ಟಿದಾರೆ....." ಅವಳು ಸ್ನಾನ ಮಾಡಿ ಅಡುಗೆ ಮನೆಗೆ ಬಂದಳು.

"ಅವಳ ಅಳುವಿಗೆ ಏನು ಕಾರಣ ಅಂತ ನನಗೆ ಗೊತ್ತು... ನಿಮ್ಮ ಹತ್ತಿರ ತುಂಬಾ ಮಾತನಾಡಬೇಕು...." ಪಿಸುದನಿಯಲ್ಲಿ ಹೇಳಿದ.

"ಸ್ನಾನ, ಊಟ, ಅಡಿಗೆ ಒಂದು ಆಗಿಲ್ಲವಲ್ಲವಪ್ಪಾ"

"ಬನ್ನಿ, ನಾನೂ ಸಹಾಯ ಮಾಡ್ತೀನಿ....." ಎನ್ನುತ್ತಾ ಅಡಿಗೆ ಮನೆಯಲ್ಲೇ ನಿಂತ.

ಅಡಿಗೆ ಮನೆಯಲ್ಲಿ ಅತ್ತಿಗೆಗೆ ಸಹಾಯ ಮಾಡುತ್ತಾ ತನ್ನ ಮನಸ್ಸಿನ ವಿಷಯ, ತಾನು ಮಾಡಿದ್ದು, ಎಲ್ಲಾ ವಿಷಯಗಳ ಬಗ್ಗೆ ತಿಳಿಸಿದ. ಈಗ ಏನು ಮಾಡಬೇಕು ಅಂತ ನನಗೆ ತಿಳಿಯುತ್ತಿಲ್ಲ, ಇವಳು ಅತ್ತು ಕರೆದು ಮನಸ್ಸನ್ನು ಕೆಡಿಸಿಕೊಂಡರೆ, ನನಗೇ ಕಷ್ಟ ನಾನೇನು ಮಾಡಲಿ ? ನೀವೇ ಹೇಳಿ....

"ಸುಮ್ಮನೆ ತಲೆ ಕೆಡಿಸಿಕೊಳ್ತೀಯ. .. ಅವಳು ತನ್ನ ಹಿಂದಿನ ಗಂಡನ ಬಗ್ಗೆ ಎಂದಾದರೂ ನಿನ್ನ ಕೈಲಿ ಹೇಳಿದ್ದಳೆ ?"

"ಇಲ್ಲ ... ಆದರೂ ಅವಳ ವರ್ತನೆಯಿಂದ ಅವಳು ಅವನನ್ನು ಮರೆತಿಲ್ಲವೆಂದು ನನಗೆ ಅನ್ನಿಸುತ್ತಿತ್ತು.. ಯಾವುದೋ ಆಲೋಚನೆಯಲ್ಲಿರುತ್ತಿದ್ದಳು."

"ಇದೆಲ್ಲ ನಿನ್ನ ಭ್ರಮೆ. ಹಾಗೆಲ್ಲಾದ್ರೂ ಸಾಧ್ಯಾನಾ ?"

"ಭ್ರಮೆ ಅಲ್ಲ, ಇಲ್ಲದಿದ್ದರೆ ಅವಳೇಕೆ ಮಗು ಹುಟ್ಟಿದ ಸಂತೋಷದಲ್ಲಿ ಅಳಬೇಕಿತ್ತು?.. ಅವನ ನೆನಪು ಬಂದಿರಲೇ ಬೇಕು ತಾನೇ ?"

"ನಂಗೊತ್ತಿಲ್ಲಪ್ಪ. ಹೋಗಲಿ ಅವಳ ಗಂಡ ಏನಂತಾನೆ ?"

"ಅವನಿಗೆ ಇವಳ ಬಗ್ಗೆಈಗ ಯಾವ ಆಸಕ್ತಿಯೂ ಇಲ್ಲ..."

"ಹಾಗಾದರೆ ಒಂದು ಕೆಲಸ ಮಾಡು. ಅವಳ ಗಂಡನನ್ನ ಕರೆಸು.ಅವನೇ ಎದುರಿಗೆ ಬಂದು ಎಲ್ಲಾ ಮಾತನಾಡಲಿ. ಆಗ ಅವಳ ಆತಂಕವೂ ಕಡಿಮೆ ಆಗುತ್ತದೆ. ಇಲ್ಲದಿದ್ದರೆ ಅವಳ ಆರೋಗ್ಯಕ್ಕೆ ಕೆಟ್ಟದು. ಎಲ್ಲಾ ತಿಳಿಯಾಗಲಿ."

"ಏಕೋ ಏನೋ ಅವನು ಅಲಕಾಳ ಬಗ್ಗೆ ಹೇಳಲು ಹಿಂಜರಿದ. ಮೊದಲು ಅವನು ಬಂದು ಮಾತನಾಡಲಿ. ಆಮೇಲೆ ನಾನುಪೋಗಿ ಸಂಧ್ಯಳನ್ನು ನೋಡ್ತೀನಿ. ನಾನಿನ್ನು ಊರಿನಿಂದ ಬಂದಿಲ್ಲ ಅಂತ ತಿಳಿಸಿಬಿಡಿ ಅವಳಿಗೆ" ಎಂದ.

'ಚೆನ್ನಾಗಿದೆ' ಎಂದುಕೊಂಡು ಗೀತ ಗೊಣಗಿದಳು.

ಮತ್ತೆ ಅದೇ ದಿನ ಅವನು ಬೆಳಗಾಂಗೆ ಹೊರಟ. ಸೀದಾ ರಘುನಾಥನ ಆಫೀಸಿಗೆ ಹೋಗಿ ಎಲ್ಲವನ್ನೂ ತಿಳಿಸಿದ. "ಅವಳು ಯಾವುದೋ ಅವ್ಯಕ್ತವಾದ ನೋವಿನಿಂದ ಭಯದಿಂದ ಆರೋಗ್ಯವನ್ನು ಕೆಡಿಸಿಕೊಳ್ಳುತ್ತಿದಾಳೆ. ನೀವು ಬಂದು ಮಾತನಾಡಿದರೆ ಅವಳ ಹೃದಯ ಹಗುರಾಗುತ್ತೆ... ಅಸಹಾಯಕ ಸ್ಥಿತಿಯಲ್ಲಿದಾಳೆ. ಅವಳನ್ನು ಹುರಿದುಂಬಿಸಿ ಧೈರ್ಯ ಹೇಳುವುದು ನಿಮ್ಮ ಕರ್ತವ್ಯ" ಎಂದ.

"ನನಗೂ ಅವಳಿಗೂ ಯಾವ ಸಂಬಂಧವೂ ಇಲ್ಲ, ನಾನೇಕೆ ಬರಬೇಕು ?"

"ಇದನ್ನೇ ಈ ಮಾತನ್ನೇ ಅವಳ ಎದುರಿಗೆ ಹೇಳಿಬಿಡಿ. ಅಲ್ಲಿಗೆ ಎಲ್ಲಾ ಇತ್ಯರ್ಥವಾಗುತ್ತೆ, ಆಗ ನನಗೂ ನೆಮ್ಮದಿ ಸಿಗುತ್ತೆ" ಅವನನ್ನು ಒಪ್ಪಿಸಿ ದಿನೇಶ ವಾಪಸ್ಸು ಹೊರಟ. ಆಫೀಸಿಗೆ ರಜ ಹಾಕಿ, ಮನಸ್ಸಿನಲ್ಲದ ಮನಸ್ಸಿನಲ್ಲಿ ರಘುನಾಥ ಬೆಂಗಳೂರಿಗೆ ಹೊರಟ. ಸೀದಾ

ತಾನು ಮುಂಚೆ ವಾಸವಾಗಿದ್ದ ಮನೆಗೆ ಬಂದ. ತನ್ನ ಮನೆಯ ವಸ್ತುಗಳೆಲ್ಲ ಯಥಾ ಸ್ಥಿತಿಯಲ್ಲಿದ್ದುದನ್ನು ಗಮನಿಸಿದ. ಆಶ್ಚರ್ಯವಾಗಿತ್ತು.

"ಆಸ್ಪತ್ರೆಯಲ್ಲಿ ಆ ಮಾತುಗಳನ್ನು ಆಡುವುದು ಸರಿಯಲ್ಲ. ನಿಮ್ಮ ಮನೆಗೇ ಕರೆದುಕೊಂಡು ಬನ್ನಿ. ನಾನೂ ಅಲ್ಲಿಗೇ ಬರ್ತೀನಿ. ಅಲ್ಲಿಯೇ ಮಾತನಾಡೋಣ" ಎಂದು ದಿನೇಶನಿಗೆ ತಿಳಿಸಿದ್ದ.

ಆ ಎರಡೂ ದಿನಗಳು ರಘುನಾಥ ತನ್ನ ಮನೆಯ ಸಾಮಾನುಗಳನ್ನು ಕಟ್ಟಿದ. ಅಕ್ಕ ಪಕ್ಕದವರಿಗೆ ತನ್ನ ಹೆಂಡತಿಗ ಹೆರಿಗೆ ಆಗಿದೆ ಎಂದಷ್ಟೇ ತಿಳಿಸಿದ. ಬಾಡಿಗೆಯ ಹಣವನ್ನು ಕೊಟ್ಟು, ಬೀಗ ಹಾಕಿ ಮಾಲೀಕನಿಗೆ ಮನೆಯನ್ನು ಒಪ್ಪಿಸಿದ.

ಇನ್ನು ಇಲ್ಲಿಯ ಋಣ ತೀರಿತೆಂದು ಭಾವಿಸಿದ. ಹಾಗೇ ನಿಂತು ಒಮ್ಮೆ ಮನೆಯನ್ನು ಅವಲೋಕಿಸಿದ. "ನನ್ನ ಸಂಧ್ಯಳ ಹೆಜ್ಜೆ ಗುರುತು ತಪ್ಪಿ ಹೋಗಿವೆ..." ಎಂದೆನಿಸಿತ್ತು.

ಸಂಧ್ಯಳನ್ನು ಡಿಸ್ಚಾರ್ಜ್ ಮಾಡಿಸಿಕೊಂಡು ಸೀದಾ ಎಸ್ಟೇಟಿನ ಮನೆಗೆ ಕರೆದುಕೊಂಡು ಹೋದರು. ಗೀತ ಸಹ ಅವರ ಜೊತೆ ಹೊರಟಳು.

ತಮ್ಮ ಮನೆಗೆ ಕರೆದುಕೊಂಡು ಹೋಗದೇ ಎಸ್ಟೇಟಿಗೆ ಏಕೆ ಕರೆತಂದರು ಎಂದು ಸಂಧ್ಯ ಯೋಚಿಸಿದ್ದಳು. ಅವಳಿಗೆ ಒಂದು ತರಹ ದಿಗಿಲಾಗಿತ್ತು. ಮಗು ಹುಟ್ಟಿ ಮೂರು ನಾಲ್ಕು ದಿನ ಕಳೆದರೂ, ದಿನೇಶನ ಸುಳಿವಿಲ್ಲ. ಗೀತಾಳನ್ನು ಕೇಳಿದಾಗ ಅವನಿನ್ನೂ ಊರಿಗೆ ಬಂದಿಲ್ಲವೆಂದೇ ಹೇಳಿದ್ದಳು. ಸಂಧ್ಯಾ ದಿಕ್ಕು ತಪ್ಪಿದವಳಂತೆ ಚಡಪಡಿಸಿದಾಗ ಗೀತ ಸಮಾಧಾನ ಮಾಡಿದ್ದಳು. ಅವನು ಸೀದಾ ಇಲ್ಲಿಗೆ ಬರುತ್ತಾನೆಂದು ತಿಳಿಸಿದ್ದಳು.

ಸಾಯಂಕಾಲ ಕತ್ತಲಾಗುತ್ತಾ ಬಂದಿತ್ತು. ಗೀತ ಮಗುವಿಗೆ ಹೊದಿಕೆ ಹೊದಿಸಿ, ಮಲಗಿಸಿ, ಸಂಧ್ಯಾಳಿಗೆ ಹಾಲನ್ನು ಕುಡಿಯಲು ಕೊಟ್ಟು ಅಲ್ಲೇ ಕುಳಿತಿದ್ದಳು. ಸ್ವಲ್ಪ ಹೊತ್ತಿನಲ್ಲೇ ಯಾರೋ ಹೊರಗೆ ಮಾತನಾಡಿದಂತೆ ಆದಾಗ, ಗೀತ ಹೊರಗೆ ಬಂದಳು.

ದೀಪ ಹಾಕದೆ ಕತ್ತಲೆಯಲ್ಲೇ ಮಲಗಿದ್ದ ಸಂಧ್ಯಾ ತನ್ನ ರೂಮಿನೊಳಕ್ಕೆ ಯಾರೋ ಬಂದುದನ್ನು ಗಮನಿಸಿದಳು. ಗೀತ ಅಥವಾ ದಿನೇಶನಲ್ಲವೆಂದು ಊಹಿಸಿ ಗಾಬರಿಯಿಂದ 'ಯಾರು?' ಎಂದಳು.

"ನಾನು.... ನಿನ್ನ ಗಂಡ... ರಘು... ಚೆನ್ನಾಗಿದೀಯಾ ?"ಕೇಳಿದ. ಧ್ವನಿ ಕಠೋರವಾಗಿರಲಿಲ್ಲ.

"ನೀವಾ ? ನೀವೇಕೆ ಇಲ್ಲಿಗೆ ಬಂದೀರಿ ? " ಅಳತೊಡಗಿದಳು.

"ಅಳಬೇಡ , ನನಗೂ ನಿನಗೂ ಯಾವ ಸಂಬಂಧವೂ ಇಲ್ಲವೆಂದು ಮತ್ತೊಮ್ಮೆ ತಿಳಿಸಿ ಹೋಗಲು ಬಂದಿದ್ದೇನೆ. ನೀನು ಇಲ್ಲಿ ಸುಖವಾಗೀದಿಯ. ದಿನೇಶ ನಿನ್ನನ್ನು ಚೆನ್ನಾಗಿ ನೋಡಿಕೊಂಡಿದಾರೆ. ಮುದ್ದಾದ ಮಗುವಿನ ತಾಯಿಯಾಗಿದೀಯ ? ಇನ್ನೇನು ? ಇಬ್ಬರೂ ಚೆನ್ನಾಗಿರಿ."

"ನೀವೇಕೆ ಕತ್ತಲಿನಲ್ಲಿ ನಿಂತು ಮಾತನಾಡುತ್ತಿದ್ದೀರಿ .. ದೀಪಹಾಕಿ. ಎದುರಿಗೆ ನಿಂತು ಮಾತನಾಡಿ... ನಾನು ನಿಮ್ಮನ್ನು ನೋಡಬೇಕು. ನನಗೆ ಮುಜುಗರವಾಗುತ್ತಿದೆ"

"ಬೇಡ ಬೇಡ ಈ ಕತ್ತಲೆಯೇ ಚೆನ್ನಾಗಿದೆ. ನಾನು ಈ ಕತ್ತಲಿನಿಂದ ಹೊರಗೆ ಹೋಗುತ್ತೇನೆ. ನೀನು ಈ ಕತ್ತಲೆಯಿಂದ ಬೆಳಕಿಗೆ ಬರಬೇಕು."

"ಏನಾಗಿದೆ ನಿಮಗೆ ? ನಿಮ್ಮ ಮಾತುಗಳು ನನಗೆ ಅರ್ಥವಾಗುತ್ತಿಲ್ಲ. ಏನೇನೋ ಆಡ್ತಿದ್ದೀರಿ."

"ಇಂದಿನಿಂದ ನಿನ್ನ ಪುನರ್ಜನ್ಮ ಅಂತ ತಿಳ್ಕೋ. ರಘು ನಿನಗೆ ತಕ್ಕ ಗಂಡನಲ್ಲ ಎಂದೇ ತಿಳ್ಕೋ. ಒಂದು ಮಗುವನ್ನು ಕರುಣಿಸದ ರೋಗಿ ಅವನು. ಅವನನ್ನು ಮರೆತು ನೀನು ಇಲ್ಲಿ ಸುಖವಾಗಿರು ಎಂದೇ ನಾನು ಹಾರೈಸುತ್ತೇನೆ."

"ನನ್ನ ತಪ್ಪೇನೇ ಇದ್ದರೂ ಕ್ಷಮಿಸಿಬಿಡಿ. ದಯವಿಟ್ಟು ಕ್ಷಮಿಸಿ" ಮತ್ತೆ ಏಳಲು ನೋಡಿದಳು. ನನ್ನನ್ಯಾಕೆ ದೂರ ಮಾಡ್ತಿದ್ದೀರಿ ? ನನ್ನ ಮೇಲೆ ಅಷ್ಟು ಕೋಪಾನಾ ?

"ನಿನ್ನದೇನೂ ತಪ್ಪಿಲ್ಲ ಸಂಧ್ಯಾ ತಪ್ಪೆಲ್ಲ ನನ್ನದೇ... ನಾನು ಈ ವಿಷಯವನ್ನು ನಿನಗೆ ಈ ಮುಂಚೆಯೇ ತಿಳಿಸಬೇಕಾಗಿತ್ತು. ಅಲ್ಲದೇ... ಆ ಸಮಯದಲ್ಲಿ ನನಗೆ ನನ್ನ ಮನಸ್ಸನ್ನು ಅರ್ಥ ಮಾಡಿಕೊಳ್ಳುವ ಸಂಗಾತಿ ಒಬ್ಬಳು ಸಿಕ್ಕಿದಳು, ಅವಳ ಸಹವಾಸದಲ್ಲಿ ಅಂಧನಾದೆ."

"ಅಂದರೆ ! ನೀವೂ ನನಗೆ ದ್ರೋಹ ಮಾಡಿದ್ರಾ ! ಛಿ... ನೀಚ..... ಯಾರವಳು ?"

"ಏನು ಬೇಕಾದರೂ ಅನ್ನು. ಎಷ್ಟು ಬೇಕಾದರೂ ಅನ್ನು. ನಿನಗೆ ತಕ್ಕವನು ನಾನಲ್ಲ. ನನಗೆ ಬೇಕಾದವಳನ್ನು ನಾನು ಆರಿಸಿಕೊಂಡಿದ್ದೇನೆ. ನನಗೆ ಇನ್ನು ನಿನ್ನ ಅಗತ್ಯವಿಲ್ಲ. ಇದಿಷ್ಟನ್ನು ಹೇಳಿ ಹೋಗಲೆಂದು ಬಂದಿದೇನೆ. ... ದೇವರು ನಿನಗೆ ಒಳ್ಳೆಯದನ್ನು ಮಾಡಲಿ ನಿನ್ನ ಸಂಸಾರ ಚೆನ್ನಾಗಿರಲಿ...." ಅವನು ಕೈ ಎತ್ತಿ ಆಡಿಸಿದಂತೆ ಕಾಣಿಸಿತು.

ಕತ್ತಲೆಯಲ್ಲಿ ಅವನು ಹಿಂದು ಹಿಂದಕ್ಕೆ ಹೊರಟಾಗ "ನಿಲ್ಲಿ ನಿಲ್ಲಿ" ಎಂದು ಕಿರುಚಿ, ಏಳಲು ಹೋಗಿ ಬಟ್ಟೆ ತೊಡರಿ, ಸಂಧ್ಯ ಕೆಳಕ್ಕೆ ಬಿದ್ದುಬಿಟ್ಟಳು. ಅವನು ನಿಲ್ಲದೇ ಹೊರಟುಹೋಗಿದ್ದ. ತಕ್ಷಣ ಗೀತ ಬಂದು ದೀಪವನ್ನು ಹಾಕಿದಳು. ಜ್ಞಾನ ಹೋಗಿದ್ದವಳನ್ನು ತಕ್ಷಣವೇ ಮತ್ತೆ ಆಸ್ಪತ್ರೆಗೆ ಸೇರಿಸಿದರು.

ಎಷ್ಟೋ ಹೊತ್ತಿನ ನಂತರ ಅವಳಿಗೆ ಜ್ಞಾನ ಬಂದಾಗ, ನಿಧಾನವಾಗಿ ಕಣ್ಣುಗಳನ್ನು ತೆರೆದಳು. ಚೆನ್ನಾಗಿ ಬೆಳಕಾಗಿತ್ತು. ಎದುರಿಗೆ ದಿನೇಶ ನಿಂತಿದ್ದ. ಅವಳನ್ನು ಓಡಿ ಮುಗುಳ್ನಕ್ಕು "ಹಲೋ ಗುಡ್‌ಮಾರ್ನಿಂಗ್" ಎಂದ.

ಅವಳು ನಕ್ಕಂತೆ ಮಾಡಿ "ಅವರೆಲ್ಲ.... ಎಲ್ಲಿ" ಎಂದು ಕೇಳಿದಳು.

"ಯಾರು ! ಯಾರೂ ಇಲ್ಲವಲ್ಲ. ನಾನು ನಾನೇ ಇಲ್ಲಿರುವುದು" ಎಂದ. ಅತ್ತಿತ್ತ

ನೋಡಿ... ಯಾರು ಬೇಕಾಗಿತ್ತು ಎಂದು ಕೇಳಿದ. ಅವಳು ತಬ್ಬಿಬ್ಬುಗೊಂಡಳು. ನಂಬಿಕೆ ಬರದವಳಂತೆ ತಲೆಯಾಡಿಸಿದಳು.

"ಎಂತಹ ಕನಸು ಅಂತೀರಿ ! ಕನಸಿನಲ್ಲಿ ಅವರು ಬಂದಿದ್ದರು... ಏನೇನೋ ಹೇಳಿದರು.... ಅವರಿಗೂ ನನಗೂ ಸಂಬಂಧವಿಲ್ಲವಂತೆ. ಈ ಮಗು ಅವರದಲ್ಲವಂತೆ. ನನ್ನ ಸಹವಾಸ ಬೇಡವಂತೆ. ಇನ್ನು ಏನೇನೋ ಆಡಿದರು ...ಛೇ... ನಾನೊಮ್ಮೆ ಅವರನ್ನು ನೋಡ್ಬೇಕು."

"ಹೌದು ಸಂಧ್ಯಾ ಈ ಮಗು ನಮ್ಮಿಬ್ಬರದು. ನಿನಗೆ ಯಾಕೆ ಇಂತಹ ಕೆಟ್ಟ ಕನಸು ಬಿತ್ತು ! ಇದು ಅವರ ಮಗುವಾಗಲು ಸಾಧ್ಯವೇ ಇಲ್ಲ."

"ಕನಸ್ನಲ್ಲಿ ? ಕನಸಿನಂತೆ ಅನ್ನಿಸಲೇ ಇಲ್ಲ. ಅವರು ಆಡಿದ್ದೆಲ್ಲಾ ಚೆನ್ನಾಗಿ ನೆನಪಿದೆ."

"ಅದು ಕನಸೇ ! ಕನಸಲ್ಲದಿದ್ದರೆ ನೀನು ಹೇಗೆ ಈ ಆಸ್ಪತ್ರೆಗೆ ಬಂದೆ ? ಯಾಕೆ ಬಂದೆ ಹೇಳು ...?

"ಅದೇ ನನಗೆ ಅರ್ಥವಾಗುತ್ತಿಲ್ಲ. ನೆನ್ನೆ ಮಧ್ಯಾಹ್ನವಿನ್ನು ಈ ಆಸ್ಪತ್ರೆಯಿಂದ ನಮ್ಮ ಮನೆಗೆ ಹೋದೆವು.... ಆದರೆ ಮತ್ತೆ ಇಲ್ಲಿದೀನಿ. ಹೇಗೆ ?"

"ತುಂಬಾ ಗಾಢವಾದ ನಿದ್ರೆ ಬಂದಿತ್ತು ನಿನಗೆ.. ಇಂಜಕ್ಷನ್ನಿನ ಪ್ರಭಾವ... ಯಾವುದೋ ಜನ್ಮದಲ್ಲಿ ನಡೆದಿದ್ದೆಲ್ಲಾ ಕನಸಿನ ರೂಪದಲ್ಲಿ ಕಾಣಿಸಿಕೊಳ್ಳುತ್ತವೆ... ಅಂತ ಹೇಳ್ತಾರೆ."

"ಹೌದು, ಹೌದು... ಎಂತಹುದೋ ಕನಸೇ ಇರಬಹುದು. ಯಾರೋ ನನ್ನೆದುರು ನಿಂತು ಮಾತನಾಡಿದ ಹಾಗೆ.... ನನಗೆ ತಿಳುವಳಿಕೆ ಹೇಳಿದ ಹಾಗೆ... ಆದರೆ ಅವರ ತರಹವೇ ಇದ್ದರು. ಹಾಗಾಗಲು ಸಾಧ್ಯವೇ ಇಲ್ಲ. ಸಾಧ್ಯವೇ ಇಲ್ಲ."

"ಸರಿ ಬಿಡು... ಇನ್ನು ಆ ಕನಸಿನ ಬಗ್ಗೇನೇ ಯೋಚಿಸ್ತೀಯೋ ಅಥವಾ ನನ್ನ ಬಗ್ಗೇನೂ ವಿಚಾರಿಸ್ತೀಯೋ ? ಮಗನ ಬಗ್ಗೆ ಹೇಳುಲ್ವಾ ?" ದಿನೇಶ ಮುಗುಳ್ನಕ್ಕು ನುಡಿದಾಗ, ಕಸಿವಿಸಿಕೊಂಡಳು.

"ಯಾವಾಗ ಬಂದಿರಿ ? ಎಲ್ಲಿಗೆ ಹೋಗಿದ್ರಿ ? ನನಗೆ ತುಂಬಾ ಭಯವಾಗಿತ್ತು."

"ಬೆಳಿಗ್ಗೆ ಬಂದೆ. ಟೂರ್ ಹೋಗಿದ್ದೆ. ಅತ್ತಿಗೆ ಇದ್ರಲ್ಲ. ಭಯ ಯಾಕೆ ?"

"ಇನ್ನೊಮ್ಮೆ ಟೂರ್‌ಗೆ ಹೋಗಬೇಡಿ. ನನಗೆ ಒಬ್ಳಿಗೇ ಬೇಜಾರಾಗುತ್ತೆ...."

"ಬೇಜಾರ್‍ಯಾಕೆ ? ಮಗ ಇದಾನಲ್ಲ.... ಜತೆಗೆ. ಅಂದಹಾಗೇ ನಿನ್ನಮಗನ್ನ ನನಗೆ ತೋರಿಸಲೇ ಇಲ್ಲ. ನನ್ನ ಹಾಗೆ ಇದಾನೋ... ನಿನ್ನ ಹಾಗೆ ಇದಾನೋ ?" ಅವಳ ಬಳಿ ಕುಳಿತ.

"ನಾನು ಇನ್ನೂ ಸರಿಯಾಗಿ ನೋಡಿಯೇ ಇಲ್ಲ, ನಿಮ್ಮ ಅತ್ತಿಗೆಗೆ ಹೇಳಿ... ಮಗುವನ್ನು ಕರೆದುಕೊಂಡು ಬರಲಿ. ನಾನು ನೋಡ್ತೀನಿ. ನೀವು ನೋಡೋರಂತೆ." ಅವಳಿನ್ನು ಗೊಂದಲದಲ್ಲೇ ಇದ್ದಂತಿತ್ತು.

"ನಡೀ ಮನೆಗೆ ಹೋಗೋಣ.... ನಾನು ಡಾಕ್ಟರನ್ನ ಕಂಡು ಬರ್ತೀನಿ" ಎಂದ. ಅವನೊಂದಿಗೆ ಬಂದ ಡಾಕ್ಟರು ಮತ್ತೊಮ್ಮೆ ಎಲ್ಲವನ್ನು ಪರೀಕ್ಷಿಸಿ ಸರಿಯಾಗಿದಾಳೆ ಎಂದು ತಿಳಿಸಿದ ಮೇಲೆ ಮತ್ತೆ ಡಿಸ್‌ಚಾರ್ಜ್ ಮಾಡಿಸಿಕೊಂಡು ಹೊರಟರು. ಸೀದಾ ಅಣ್ಣನ ಮನೆಗೆ ಬಂದರು. ಟ್ಯಾಕ್ಸಿಯಿಂದ ಇಳಿದ ಅವಳು ಅತ್ತಿತ್ತ ನೋಡುವಷ್ಟರಲ್ಲಿ ಗೀತ ಅವಳ ಕೈಗೆ ಮಗುವನ್ನು ತಂದಿತ್ತಳು.

ಸಂಧ್ಯಾ ಮೆಚ್ಚುಗೆಯಿಂದ ಅಕ್ಕರೆಯಿಂದ ಮಗುವನ್ನು ನೋಡಿ, ದಿನೇಶನ ಕಡೆ ತಿರುಗಿ ನುಡಿದಳು. ನಮ್ಮ ಮಗು ಮುದ್ದಾಗಿದೆ ಅಲ್ಲವೇ?"

"ಹೌದು ಮೊದಲು ಒಳಗೆ ಹೋಗೋಣ ನಡಿ" ಎನ್ನುತ್ತಾ ಅವಳ ಭುಜವನ್ನು ಬಳಸಿ ಅವಳನ್ನು ನಡೆಸಿಕೊಂಡು ಮನೆ ಬಾಗಿಲಿಗೆ ಬಂದ. ಗೀತ ಹೊರಬಾಗಿಲಲ್ಲಿ ಅವರುಗಳನ್ನು ನಿಲ್ಲಿಸಿ ಕದಲಾರತಿ ಎತ್ತಿ ಒಳಕ್ಕೆ ಬರಮಾಡಿಕೊಂಡಳು.

ದಿನೇಶ ಗೀತಳ ಕಡೆ ನೋಡಿದ. ಗೀತ ಕಣ್ಣು ಕಿರಿದು ಮಾಡಿ ನಕ್ಕಳು. ಸಂಧ್ಯ ಅವಳಿಬ್ಬರ ಕಡೆ ಗಮನವನ್ನು ಹರಿಸದೆ ಮಗುವನ್ನು ಎದೆಗೆ ಅವುಚಿಕೊಂಡು ರೂಮಿನೊಳಕ್ಕೆ ಹೋದಳು.

ಮಂಚದ ಮೇಲೆ ಕುಳಿತು ಮಗುವಿಗೆ ಹಾಲುಣಿಸುವಾಗ, ತಾಯ್ತನದ ಹಿರಿಮೆಯ ಅನುಭವ ಉತ್ತುಂಗಕ್ಕೇರಿತು. ಇದಕ್ಕಾಗಿ ಈ ದಿನಕ್ಕಾಗಿ ಈ ಸುಂದರ ಅನುಭವಗಳಿಗಾಗಿ ತಾನು ಹಂಬಲಿಸಿದ್ದನಲ್ಲವೆ ? ತನಗೆ ಎಲ್ಲಾ ಸಿಕ್ಕಿದೆ. ಇದಕ್ಕಿಂತ ಮಹದಾನಂದ ಇನ್ಯಾವುದಿದೆ? ಈ ಕ್ಷಣ ನಿರಂತರವಾಗಿರಬೇಕು. ಈ ಆನಂದ ಯಾವಾಗಲೂ ಇರಬೇಕು. ಆದರೆ ಆ ಕನಸು...? ಆ ಕನಸು....? ಅದು ಕನಸಲ್ಲ, ಖಂಡಿತವಾಗಿಯೂ ಕನಸಲ್ಲ .. ನನ್ನ ಗಂಡ ನನ್ನೆದುರಿಗೆ ನಿಂತು ಹೇಳಿದ್ದ ಮಾತು... ನಾನು ನಿದ್ದೆ ಹೋಗಿರಲಿಲ್ಲ. ಇವರೇಕೆ ಸುಳ್ಳು ಹೇಳಿದರು ?... ಅವನು ಹೇಗೆ ಬಂದ ? ಯಾಕೆ ಬಂದಿದ್ದ? .. ಬೇರೊಬ್ಬಳ ಸಹವಾಸ ಮಾಡಿದೀನಿ ಅಂತಂದ. ಸುಳ್ಳೇ ನಿಜವೇ ? ನಿಜ ಒಂದಲ್ಲ ಒಂದು ದಿನ ತಿಳಿದೇ ತಿಳಿಯುತ್ತೆ. ತಿಳಿಯದಿದ್ದರೂ ಪರವಾಗಿಲ್ಲ, ಅದನ್ನೆಲ್ಲ ಮರೆಸುವ ಶಕ್ತಿ ಇಲ್ಲಿದೆ....ಇದೇ ಸಂಜೀವಿನಿ...ಇದೇ ಅಮೃತ. ಇದೇ ಅದ್ಭುತ ಎನ್ನುತ್ತಾ ಮಗುವನ್ನು ಎತ್ತಿಕೊಂಡು ಲೊಚಲೊಚನೆ ಮುದ್ದಿಟ್ಟಳು.

ದಿಢೀರನೇ ಆದ ಆಘಾತಕ್ಕೆ ಬೆಚ್ಚಿ ಬಿದ್ದ ಮಗು ಅಳತೊಡಗಿತು. ಗಾಬರಿಯಿಂದ ದಿನೇಶ ಒಳಗೆ ಬಂದ. ಮುದ್ದಿಸುವುದನ್ನು ನಿಲ್ಲಿಸಿ , ದಿನೇಶನ ಕಡೆ ನೋಡಿ, ಮುಗುಳ್ನಗುತ್ತಾ ಹೇಳಿದಳು.

"ನಮ್ಮ ಮಗೂಗೆ 'ಸಂಜೀವ' ಅಂತ ಹೆಸರಿಡೋಣವಾ ?"

"ಅಬ್ಬಾ! "ಎಂದುಕೊಂಡು ಎದೆ ನೀವಿಕೊಂಡ ದಿನೇಶ .

ಹಿಂದೆಯೇ ಬಂದು ನಿಂತಿದ್ದ ಗೀತಳಿಗೂ ಅವಳ ಮಾತು ಕೇಳಿಸಿತ್ತು. ಅಂತೂ ದಿನೇಶ ಬಾಳಿನಲ್ಲಿ ಮತ್ತೊಬ್ಬಳು ಬಂದಳು. ಜತೆಯಲ್ಲಿ ಸಂಜೀವಿನಿಯನ್ನು ತಂದಳು, ಜೀವನ ತುಂಬಿದಳು ಎಂದು ಹರ್ಷಗೊಂಡಳು.

ಹೆಜ್ಜೆಗಳು ದಾರಿಯನ್ನು ತಪ್ಪಿದರೂ ಮಾರ್ಗವನ್ನು ಕಂಡುಕೊಂಡವು.

ಇದು ಭಗವಂತನ ಲೀಲೆ ಎಂದುಕೊಂಡಳು. ಸಂಧ್ಯಳ ಮುಖದ ಮೇಲಿನ ಹೊ ಕಳೆಯನ್ನು ಕಂಡು ದಿನೇಶನಿಗೆ ಮುಖದಲ್ಲಿ ಸಮೃದಿ ಮೂಡಿತ್ತು. ಗೀತ ನಿಡಿದಾದ ಉಸಿರ ಬಿಟ್ಟು ಮೇಲೆತ್ತಿ ಕೈಗಳನ್ನು ಜೋಡಿಸಿದಳು.

"ದಾರಿ ತಪ್ಪಿದ ಹೆಜ್ಜೆಗಳು ಒಂದು ನೆಲೆಯನ್ನು ಹುಡುಕಿಕೊಂಡಿವೆ. ಇನ್ನು ಈ ನೆ ನಿರಂತರ ವಾಗಿರಲಿ ಭದ್ರವಾಗಿ ಊರಿಕೊಂಡಿರಲಿ" ಎಂದು ಭಗವಂತನಲ್ಲಿ ಬೇಡಿದಳು.

ಸಂಧ್ಯಾ ಮಗುವಿನ ಮುದ್ದಾದ ಮುಖವನ್ನೇ ನೋಡುತ್ತಿದ್ದಳು. ಅವಳ ಬಳಿಯಲ್ಲಿ ನಿಂ ದಿನೇಶ ಸಂಧ್ಯಾಳ ಹೆಮ್ಮೆಯ ಮುಖವನ್ನೇ ಗಮನಿಸುತ್ತಿದ್ದ. ಮನಸ್ಸು ನಿರಾಳವಾಗಿತ್ತು. ಆತಂ ದೂರವಾಗಿತ್ತು. ಅಲಕಾಳ ನೆನಪು ಮಸಕಾಯಿತು.

ಬಾಗಿಲ ಬಳಿ ನಿಂತ ಗೀತ, ಈ ಪುಟ್ಟ ಸಂಸಾರವನ್ನು ನೋಡುತ್ತಿದ್ದಳು. ಅವಳ ಹಿಂ ಬಂದು ನಿಂತ ಅವಳ ಗಂಡ, ಅವಳನ್ನು ಬಳಸಿ ಕಿವಿಯಲ್ಲಿ ಏನನ್ನೋ ಉಸುರಿದ. ಇಬ್ಬರು ನಿಧಾನವಾಗಿ ಮೌನದಿಂದ ಅಲ್ಲಿಂದ ಸರಿದರು. ಹೆಜ್ಜೆಗಳ ಸಪ್ಪಳ ನಿಧಾನವಾಗಿ ಮರೆಯಾಯಿತು. ದಿನೇಶ ಅವಳ ಬಳಿ ಕುಳಿತ. ಮತ್ತೊಮ್ಮೆ ನನ್ನ ಬಾಳಿನಲ್ಲಿ ಹೆಜ್ಜೆಯನ್ನಿಟ್ಟಿರು ಇವರಿಬ್ಬರೂ 'ನನ್ನವರು' ಎಂಬ ಅಭಿಮಾನ ಮೂಡಿತು. ಮಗುವಿನ ಪುಟ್ಟ ಹೆಜ್ಜೆಗಳನ್ನು ತ ಕೈಗಳ ಮೇಲೆ ಇರಿಸಿಕೊಂಡ.



" ಹೆಜ್ಜೆಗಳು " ಒಂದು ಲಘುಕಾದಂಬರಿ. ಕೌಟುಂಬಿಕ ಪಾತ್ರಗಳನ್ನೊಳಗೊಂಡ ಒಂದು ಸಾಮಾಜಿಕ ಕಾದಂಬರಿ. ಸಾಂಸಾರಿಕ ಜೀವನದಲ್ಲಿ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಸಮಸ್ಯೆಗಳು ಗಂಭೀರ ಸ್ಥಿತಿಯನ್ನು ತಲುಪಿದಾಗ ದಿಕ್ಕು ತೋಚದಂತಾಗುತ್ತದೆ. ಹೆಜ್ಜೆಗಳು ತಪ್ಪು ದಾರಿಯನ್ನು ಹಿಡಿಯುತ್ತವೆ. ಮತ್ತೆ ಹಿಂದಕ್ಕೆ ಬರಲಾಗದಂತಾದಾಗ, ಹೆಜ್ಜೆಗಳ ಮಾರ್ಗವೇ ಬದಲಾಗುತ್ತದೆ. ಒಂದೆಡೆ ಹೋಗಿ ನಿಲ್ಲಬೇಕಾದ ಸ್ಥಿತಿ ಕಂಡು ಬರುತ್ತದೆ. ಅವಕಾಶವೂ ಒದಗುತ್ತದೆ. ಈ ಅಂಶವನ್ನು ಮುಖ್ಯವನ್ನಾಗಿಟ್ಟುಕೊಂಡ ಕಾದಂಬರಿ ಇದು.

**ಸೌಮ್ಯ. ಎಂ**
ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು
ಬಸವನಗುಡಿ, ಬೆಂಗಳೂರು-4

**ಬೆಲೆ ರೂ. 60/-**